# ಅಚಲ

ಜನವರಿ 8, 1990 ಬೆಲೆ : ರೂ. 1-50
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ದ್ವೈಮಾಸಿಕ



ಸಂಪುಟ ೫ ಸಂಚಿಕೆ ೬

‘ಅಚಲ’ ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ.
ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೇನ್, ವೈಯಾಳಿಕಾವಲ್
ಬೆಂಗಳೂರು–560 003.



ಚಂದಾ ವಿವರ

| | | | |
|---|---|---|---|
| ವಾರ್ಷಿಕ ಚಂದಾ | : | ರೂ | 10–00 |
| ಬಿಡಿ ಪ್ರತಿ | : | ರೂ | 1–50 |
| ವಿಶೇಷ ಪ್ರತಿ | : | ರೂ | 2–00 |
| ಆಜೀವ ಚಂದಾ | : | ರೂ | 100–00 |

Printed at PRINTSWELL, 78, 2nd Main Road
Nagappa Block, Srirampuram, Bangalore-21 &
Published by Dr. G. Ramakrishna on behalf of
Jagruthi Mahila Adhyayana Kendra
26, I Main, Vyalikaval, Bangalore-560 003.
Editor : N. GAYATRI

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

## ನಮ್ಮ ಹೊಸ ವಿಳಾಸ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, ಒಂದನೇ ಮೇನ್,
ವೈಯ್ಯಾಲಿಕಾವಲ್,
ಬೆಂಗಳೂರು–560 003.

## ಒಳಗೇನಿದೆ....

ಸ್ತ್ರೀ ಚಕ್ರ
(ಕವನ) —ಸಂಜೀವ ಕುಲಕರ್ಣಿ

ವರದಕ್ಷಿಣೆ
ಒಂದು ಸಮಾಜ ಶಾಸ್ತ್ರೀಯ ಅಧ್ಯಯನ

ಸ್ತ್ರೀ ಪರ ಚಿಂತನೆಯ ಚಿಗುರು—
ಸೀಮಂತಿನಿ ನಿರಂಜನ

ಇನ್ನೂ ಲೆಕ್ಕಕ್ಕೆ ಸಿಗದ ದುಡಿಮೆ

ಅಂಡ್ ಸ್ಟಿಲ್ ದೆ ಡಾನ್ಸ್

## ರಾಜಕೀಯದಲ್ಲಿ ಸ್ತ್ರೀ ಶಕ್ತಿ........

## ಪ್ರಿಯ ಸಂಗಾತಿಗಳಿಗೆಲ್ಲ ಹೊಸ ವರ್ಷದ ಶುಭಾಶಯಗಳು

ಈ ಸಂಚಿಕೆಯೊಂದಿಗೆ ಅಚಲ ತನ್ನ ಐದನೆಯ ವರ್ಷವನ್ನು ಯಶಸ್ವಿಯಾಗಿ ಮುಗಿಸುತ್ತಿದೆ. ಮಹಿಳಾ ಅಧ್ಯಯನ ಮತ್ತು ಜಾಗೃತಿಯನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಆರಂಭವಾದದ್ದು ಈ ಪತ್ರಿಕೆ. ಕಲುಶಿತ ರಾಜಕೀಯ, ಸಾಮಾಜಿಕ ಪರಿಸ್ಥಿತಿಯಲ್ಲಿ ಕ್ಷೀಣವಾದ ಮಹಿಳಾ ಧ್ವನಿಯನ್ನು ಗುರುತಿಸುವ, ಬಲಪಡಿಸುವ ಉದ್ದೇಶಹೊತ್ತು ನಡೆದು ಬಂದ ಈ ಪತ್ರಿಕೆ ಸಾಧಿಸಿರಬಹುದಾದ್ದು ಬಿಂದು ಮಾತ್ರ. ಇಡೀ ಸಮಸ್ಯೆಯ ಮಹಾ ಸಾಗರವೇ ಮುಂದೆ ಸವಾಲಾಗಿ ನಿಂತಿದೆ.

ಐದು ವರ್ಷದ ಹಿಂದೆ ಪತ್ರಿಕೆ ಆರಂಭವಾದಾಗ ಕರ್ನಾಟಕದಲ್ಲಿ ಇದ್ದ ರಾಜಕೀಯ ಪರಿಸ್ಥಿತಿ ಕೊಂಚ ತಿರುಗುಮುರುಗಾಗಿದೆ. ಆದರೆ ರಾಜಕೀಯ ವ್ಯವಸ್ಥೆಯ ಮೂಲಭೂತ ಬದಲಾವಣೆಯೇನೂ ಇದರಿಂದ ಉಂಟಾಗಿಲ್ಲ. ಆಗ ಕೇಂದ್ರದಲ್ಲಿ ಕಾಂಗ್ರೆಸ್ ಸರ್ಕಾರದ ಆಡಳಿತ. ಹಾಗೂ ರಾಜ್ಯದಲ್ಲಿ ಜನತಾ ಆಡಳಿತವಿತ್ತು. ಈ ಐದು ವರ್ಷಗಳ ಭಿನ್ನ ಸರ್ಕಾರದ ಅವಧಿಯಲ್ಲಿ ಮಹಿಳೆಯ ಸ್ಥಿತಿಗತಿಗಳನ್ನು ಉತ್ತಮಪಡಿಸಬಹುದಾದ ಕಾರ್ಯಕ್ರಮವಾಗಲೀ ಪ್ರಯತ್ನವಾಗಲೀ ವಿಶೇಷವಾಗಿ ನಡೆದದ್ದು ಕಡಿಮೆಯೇ! 'ತಾಳಿ ಭಾಗ್ಯ' ಕೊಡಿಸಿ ಪುಣ್ಯ ಕಟ್ಟಿಕೊಂಡ ಸರ್ಕಾರಕ್ಕೆ ಕುದುರೆಮೋತಿ ಮಹಂತನು ನಾರಿಯ ಬೆತ್ತಲೆ ಸೇವೆ ಮಾಡಿದ್ದು ಸೈರಿಸಲು ಹೇಗೆ ಸಾಧ್ಯವಾಯಿತೋ!

ಕೇಂದ್ರದಲ್ಲಿದ್ದ ಕಾಂಗ್ರೆ ಸರ್ಕಾರವೂ ವೋಟಿನ ರಾಜಕೀಯದಲ್ಲಿ ಮಹಿಳೆಯರ ಹಿತಾಸಕ್ತಿಯನ್ನು ಸಂಪೂರ್ಣ ಕಡೆಗಣಿಸಿತು. ಮುಸ್ಲಿಂ ಖಾಸಗಿ ಕಾಯ್ದೆಯ ನೆವದಲ್ಲಿ ವಿಚ್ಛೇದಿತ ಮುಸ್ಲಿಂ ಮಹಿಳೆಗೆ ಸರ್ಕಾರ ಮಾಡಿದ ಅನ್ಯಾಯ ಅಷ್ಟಿಷ್ಟಲ್ಲ. ಹಾಗೆಯೇ ಕಾನೂನು ಬಾಹಿರವಾದ ಸತಿ ಪದ್ಧತಿಗೆ ಸಿಲುಕಿ ಕೊಲೆಯಾದ ರೂಪ್‌ಕನ್ವರ್‌ಳ ಜೀವ ಉಳಿಸುವ ಮತ್ತು ಇಂತಹ ಪ್ರಕರಣಗಳು ಮುಂದೂ ನಡೆಯದಿರುವಂತೆ ಕಠಿಣ ಕ್ರಮಗಳನ್ನು ಕೈಗೊಳ್ಳಬಹುದಾದ ದಕ್ಷತೆಯನ್ನು ಸರ್ಕಾರ ತೋರಲಿಲ್ಲ. ಮುಖ್ಯವಾಗಿ ಇವಕ್ಕೆಲ್ಲಾ ಕಾರಣ ರಾಜಕೀಯ ಸಂಕಲ್ಪದ ದಿವಾಳಿತನ.

ರಾಜಕೀಯವಾಗಿ ಮಹಿಳೆಯರು ಅಲ್ಪ ಸಂಖ್ಯಾತರು. ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ವರ್ಷದಿಂದ ವರ್ಷಕ್ಕೆ ಕ್ರಮೇಣ ಕಡಿಮೆಯಾಗಹತ್ತಿದೆ. ಲೋಕಸಭಾ ಚುನಾವಣೆಯಲ್ಲಿ ಇರುವ 525 ಸ್ಥಾನಕ್ಕೆ ಸ್ಪರ್ಧಿಸಿದ್ದವರು 150 ಮಂದಿ. ಅದರಲ್ಲಿ ವಿಜಯಿಯಾದವರು ಕೇವಲ 28ಮಂದಿ (ಕಳೆದ ಭಾರಿ 43 ಮಂದಿ ಲೋಕಸಭಾ ಚುನಾವಣೆಯಲ್ಲಿ ವಿಜಯಿಯಾಗಿದ್ದರು). ಒರಿಸ್ಸಾ, ಗುಜರಾತ್, ಹರಿಯಾಣ, ಹಿಮಾಚಲಪ್ರದೇಶ, ಅರುಣಾಚಲಪ್ರದೇಶ, ಸಿಕ್ಕಿಂ, ತ್ರಿಪುರ ಮೇಘಾಲಯ, ನಾಗಾಲ್ಯಾಂಡ್—ಈ ರಾಜ್ಯಗಳಿಂದ ಒಬ್ಬ ಮಹಿಳಾ ಪ್ರತಿನಿಧಿಯಾದರೂ

ಚುನಾಯಿತರಾಗಿಲ್ಲ. ಕರ್ನಾಟಕದಿಂದ ವಿಜಯಿಯಾದವರು ಬಸವರಾಜೇಶ್ವರಿ ಒಬ್ಬರೇ. ಹಾಗೆಯೇ ಕರ್ನಾಟಕದ ವಿಧಾನ ಸಭೆಯಲ್ಲಿ ಚುನಾಯಿತರಾದ ಆರು ಮಂದಿಯೂ ಕಾಂಗ್ರೆಸ್ ಸದಸ್ಯೆಯರು.

ರಾಜಕೀಯದಲ್ಲಿನ ಮಹಿಳೆಯರ ಅಲ್ಪಸಂಖ್ಯೆಯು ಮೂಲ ಅವರ ಸಾಮಾಜಿಕ, ಆರ್ಥಿಕ ಹಿಂದುಳಿದಿರುವಿಕೆಯೇ ಆಗಿದೆ. ಅವರ ರಾಜಕೀಯ ನಿಷ್ಕ್ರಿಯತೆಯಿಂದಾಗಿ ರಾಜಕೀಯವಾಗಿ ಮಹತ್ವದ ವಿಷಯಗಳನ್ನು ಕುರಿತಂತೆ ಹೆಚ್ಚು ಪ್ರಭಾವ ಬೀರಲು ಅವರಿಂದ ಸಾಧ್ಯವಾಗುವುದಿಲ್ಲ. ಈಗ ಕಾಣಬರುತ್ತಿರುವ ಅತ್ಯಲ್ಪ ಮಹಿಳಾ ಪ್ರಾತಿನಿಧ್ಯವು ಎದುರಿಸಬೇಕಾಗಿ ಬಂದಿರುವ ಕಂಟಕಗಳಿಗೆ ನಿದರ್ಶನವಾಗಿ ಕಳೆದ ತಿಂಗಳು ತುರುವೇಕೆರೆ ತಾಲ್ಲೂಕಿನ ತಂಡಗ ಮಂಡಲ ಪಂಚಾಯಿತಿ ಸದಸ್ಯೆಯ ಪ್ರಕರಣವು ಇನ್ನೂ ನಮ್ಮ ಕಣ್ಣ ಮುಂದಿದೆ.

ತಂಡಗ ಮಂಡಲ ಪಂಚಾಯಿತಿ ಕಾಂಗ್ರೆಸ್ ಸದಸ್ಯೆಯಾದ ಗಂಗಮ್ಮ ಎಂಬುವವರು ಡಿಸೆಂಬರ್ 8ರಂದು ರಾತ್ರಿ 8ರ ಸಮಯದಲ್ಲಿ ತನ್ನ ಗೆಳತಿಯೊಬ್ಬರೊಡನೆ ಮಾತನಾಡುತ್ತಾ ನಿಂತಿದ್ದಾಗ ಅದೇ ಗ್ರಾಮದ ನಂಜಪ್ಪ ಹಾಗೂ ಇತರ ಐದು ಮಂದಿ ಆಕೆಯ ಮೇಲೆ ಹಲ್ಲೆ ನಡೆಸಿದರು. ಸುಮಾರು 300 ಮೀಟರ್ ದೂರ ಅವರನ್ನು ಬೆತ್ತಲೆಗೊಳಿಸಿ ಕಂಬಕ್ಕೆ ಕಟ್ಟಿ ಥಳಿಸತೊಡಗಿದರು. ಬೀದಿಯಲ್ಲಿ ಹೋಗುತ್ತಿದ್ದ ಕೆಲವರು ಈ ಬರ್ಬರ ಕೃತ್ಯವನ್ನು ಕಂಡು ಧಾವಿಸಿ ಬಂದು ಗಂಗಮ್ಮ ಅವರನ್ನು ರಕ್ಷಿಸಿದರು. ಗಂಗಮ್ಮ ನಂತರ ಪೋಲೀಸರಿಗೆ ನೀಡಿದ ದೂರಿನ ಪರಿಣಾಮವಾಗಿ ಆರು ಮಂದಿಯನ್ನು ಬಂಧಿಸಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದರು. ಈ ಕೃತ್ಯಕ್ಕೆ ಮುಖ್ಯವಾಗಿ ರಾಜಕೀಯ ದ್ವೇಷವೇ ಕಾರಣವೆನ್ನಲಾಗಿದೆ. ಇದೊಂದು ಮಾನವಕುಲಕ್ಕೆ ಆದ ಅವಮಾನದ ಘಟನೆ.

ರಾಜಕೀಯವಾಗಿ ಸಕ್ರಿಯವಾಗಬಯಸುವ ಮಹಿಳೆ ಎದುರಿಸಬೇಕಾದ ಕಷ್ಟನಷ್ಟಗಳು ಇವು. ಇತ್ತೀಚೆಗಂತೂ ಇಂತಹ ವಸ್ತ್ರಾಪಹರಣದ ಪ್ರಕರಣಗಳು ಹೆಚ್ಚುತ್ತಲೇ ಇವೆ. ಮಾನರಕ್ಷೆ, ಪ್ರಾಣರಕ್ಷೆ ಮಾಡಲು ಯಾವ ಕೃಷ್ಣಪರಮಾತ್ಮನೂ ಬರಲಾರ. ಇಂತಹ ದುಷ್ಟರ ಸಂಚನ್ನು ಮುರಿಯಲು ಸ್ತ್ರೀ ಶಕ್ತಿ ಸಂಘಟಿತವಾಗುವುದೊಂದೇ ದಾರಿ.

—ಗಾಯಿತ್ರಿ. ಎನ್.

---

**ಅಚಲ ಚಂದಾ ನವೀಕರಿಸಿ.**

**ಪತ್ರಿಕೆಯನ್ನು ಪ್ರೋತ್ಸಾಹಿಸಿ.**

---

## ಕವನ

### ಸ್ತ್ರೀ ಚಕ್ರ

ಒಂಬತ್ತು ತಿಂಗಳು
ಹೊಟ್ಟೆಯಲ್ಲಿ ಹೊತ್ತಾಗ ಭಾರ
ಆಗಿರಲಿಲ್ಲ ತಿಳಿದಿರಲಿಲ್ಲ–
ಹಾದುದರಿಂದ.
ಹತ್ತು ಗಂಟೆಗಳ ಬೇನೆ ಧರೆಗೆ ಇಳಿ–
–ಸಿದ ಕ್ಷಣವೇ ಹೆತ್ತ ಮನೆಗೆ ಬಾರದ
ಮೊಟ್ಟೆ ಇವಳು ಹೆಣ್ಣು
ಆದುದರಿಂದ.

ಎರಡು ಮೂರರ ಮಗು
ಮನೆಯೆಲ್ಲ ಕಿಲಕಿಲ ನಗು
ಎಲ್ಲವೂ ತನಗೇ ಹೆಚ್ಚು, ಇನ್ನೂ ಹೆಚ್ಚು,
ಯಾವುದಕ್ಕೂ ತಾನು ಮೊದಲು

ಆ ತೊದಲು, ಆ ರಂಪ ಆ ಚೇಷ್ಟೆ
ಎಲ್ಲ ಎಷ್ಟು ಮುದ್ದು
ಥೇಟ್ ಗಂಡು ಮಗುವಿನ ಹಾಗೆ !

ಆರು ಏಳರ ಬಾಲೆ
ಹೆರಳಿಗೆ ಆಗೀಗ ಹೂ ಮಾಲೆ
ಅಷ್ಟಿಷ್ಟು ಶಾಲೆ
ಬೆಳೆಯುತ್ತಿರುವ ತಲೆಶೂಲೆ.

ಹನ್ನೆರಡು ಹದಿಮೂರರಲ್ಲಿ
ಹರೆಯ ಬಂದು ಮೈ ಅರಳಿಸಿ
ಮೊಲೆ ಮೂಡಿಸಿ ಮುಟ್ಟು ಮಿನುಗಿಸಿದಾಗ
ಹಾರುವ ತವಕ ಇವಳಿಗೆ
ಹಕ್ಕಿಯಾಗಿ ಬಾನೆಲ್ಲ
ಹೆತ್ತವರಿಗೊ ಹೊರಗೆ ಕಳಿಸಲಾಗದ ಹೊರೆ
ಯಾವ ಕ್ಷಣವೂ ಸಿಡಿಯಬಹುದಾದ ಬಾಂಬು.

ಹದಿನೇಳು ಹದಿನೆಂಟರಲ್ಲಿ
ಹುಡುಕಿ ನೆಂಟತನ ಕಟ್ಟಿ ಗಂಟು
ಹಾಕಿದಾಗ ಹೊತ್ತು
ಉಶ್ ! ಎಂಥ ಭಾರ ಇಳಿಯಿತು
ಹಿರಿಯರಿಗೆಲ್ಲ. ಇವಳಿಗೆ
ಇವಳೊಳಗಿನವಳಿಗೆ ಪುನರಾರಂಭ
ಹಳೆಯ ಹಾಡೇ ಸ್ವಲ್ಪ
ಹೊಸ ಧಾಟಿಯಲ್ಲಿ.

—ಸಂಜೀವ ಕುಲಕರ್ಣಿ

# ವರದಕ್ಷಿಣೆ — ಒಂದು ಸಮಾಜಶಾಸ್ತ್ರೀಯ ಅಧ್ಯಯನ

ವರದಕ್ಷಿಣೆಯನ್ನು ಕುರಿತ ಎನ್‌ಸೈಕ್ಲೋಪೀಡಿಯಾ ಆಫ್ ಸೋಷಿಯಲ್ ಸೈನ್ಸ್‌ಸ್‌ನ ವ್ಯಾಖ್ಯೆ ಹೀಗಿದೆ- "ಸಾಮಾನ್ಯವಾಗಿ ವರದಕ್ಷಿಣೆಯೆನ್ನುವುದು ಪುರುಷನು ಮದುವೆಯ ಸಂದರ್ಭದಲ್ಲಿ ಹೆಣ್ಣಿನ ಅಥವಾ ಅವಳ ಕಡೆಯವರಿಂದ ಪಡೆಯುವ ಆಸ್ತಿ." ಹಾಗೆ ಮುಂದುವರಿದಂತೆ ಈ ಗ್ರಂಥದಲ್ಲಿ ಇನ್ನೊಂದು ಮಾತಿದೆ. ವರದಕ್ಷಿಣೆ ಎನ್ನುವ ಪದ ಹೆಣ್ಣಿನ ಆಸ್ತಿ ಅಥವಾ ಪಿತ್ರಾರ್ಜಿತ ಆಸ್ತಿಗೆ ಸಂಬಂಧಪಟ್ಟದ್ದು. ಆದ್ದರಿಂದಲೇ ವಿವಾಹಿತ ಪುರುಷನಿಗೆ ಹೆಣ್ಣಿಗೆ ವಿಚ್ಛೇದನಕೊಟ್ಟು ಕೈ ತೊಳೆದುಕೊಳ್ಳುವುದು ಅಷ್ಟು ಸುಲಭದ ವಿಷಯವಲ್ಲ. ಹೆಂಡತಿಯೆನ್ನುವವಳು ದನಕರುಗಳಂತೆ ವ್ಯಾಪಾರಕ್ಕಿಟ್ಟ ವಸ್ತುವಾಗಿರದೆ ಆಸ್ತಿ, ಅಂತಸ್ತುಗಳನ್ನು ಹೊಂದಿರುವವಳಾಗಿರುತ್ತಾಳೆ.

ಎನ್‌ಸೈಕ್ಲೋಪೀಡಿಯಾ ಆಫ್ ರಿಲೀಜನ್ ಅಂಡ್ ಎಥಿಕ್ಸ್‌ನಲ್ಲಿ ಗುರುತಿಸಿರುವಂತೆ ಚರಿತ್ರೆಯಲ್ಲಿ ವರದಕ್ಷಿಣೆಗೆ ಸಂಬಂಧಪಟ್ಟಂತೆ ಕೆಲವು ಸಂಗತಿಗಳನ್ನು ಗಮನಿಸಬಹುದು ಅಥೆನ್ಸಿನಲ್ಲಿ ಗೌರವಾನ್ವಿತ ಮದುವೆಗೆ ವರದಕ್ಷಿಣೆ ಒಂದು ಮುಖ್ಯ ಅಗತ್ಯಗಳಲ್ಲಿ ಒಂದು. ಗ್ರೀಸ್‌ನ ರಾಜ ಡೆಮೋಸ್ತನೀಸ್ ತನ್ನ ಹದಿನಾಲ್ಕು ತೂಕದ ಆಸ್ತಿಯಲ್ಲಿ ಎರಡು ತೂಕ ಮಗಳ ಮದುವೆಯಲ್ಲಿ ವರದಕ್ಷಿಣೆಯಾಗಿ ಕೊಟ್ಟ. ಪಾಶ್ಚಾತ್ಯ ರಾಷ್ಟ್ರಗಳಾದ ಗ್ರೀಸ್, ಇಂಗ್ಲೆಂಡ್‌ಗಳಲ್ಲಿ ಸುಮಾರು ಎರಡು ಸಾವಿರ ವರ್ಷಗಳ ಹಿಂದಿನಿಂದಲೂ ಈ ಪದ್ಧತಿ ಇತ್ತು. ವಿವಾಹದಲ್ಲಿ ಆಯ್ಕೆಯ ಸ್ವಾತಂತ್ರ್ಯ, ಹೆಚ್ಚುತ್ತಿರುವ ಆರ್ಥಿಕ ಪ್ರಗತಿ, ವಿದ್ಯಾಭ್ಯಾಸ, ಇವುಗಳಿಂದಾಗಿ ಅಮೆರಿಕಾ, ಇಂಗ್ಲೆಂಡ್ ಮತ್ತು ರಷ್ಯಾಗಳಲ್ಲಿ ವರದಕ್ಷಿಣೆಯ ಸಂಸ್ಥೆಯೇ ಸಂಪೂರ್ಣವಾಗಿ ಇಲ್ಲವಾಗಿದೆ. ರಷ್ಯಾದಲ್ಲಿ ಕ್ರಾಂತಿಯ ನಂತರ ಯಾವುದೇ ವಿಶೇಷ ಪ್ರಯತ್ನವೂ ಇಲ್ಲದೆ ವರದಕ್ಷಿಣೆಯ ಸಮಸ್ಯೆ ನಿರ್ನಾಮವಾಗಿದೆ. ಆದರೆ ಈ ಯಾವ ದೇಶಗಳಲ್ಲೂ ವರದಕ್ಷಿಣೆ ಭಾರತದಲ್ಲಿರುವಂತೆ ಸಮಸ್ಯೆಯಾಗಿಲ್ಲ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿದ್ದಂತೆ ವರನಿಗೆ ಉಡುಗೊರೆ ಪದ್ಧತಿ ಪ್ರಾಚೀನ ಭಾರತದಲ್ಲಿಯೇ ಕಂಡುಬರುತ್ತದೆ. ಡಾ॥ ಪಿ. ವಿ. ಕಾಣೆಯವರು ತಮ್ಮ ಧರ್ಮಶಾಸ್ತ್ರದ ಚರಿತ್ರೆಯ ಗ್ರಂಥದಲ್ಲಿ "ವಧು ಶುಲ್ಕವೆಂದರೆ ಗೃಹಕೃತ್ಯಕ್ಕೆ ಅಗತ್ಯವಾದ ಪಾತ್ರೆ ಪದಾರ್ಥಗಳು, ಹಾಲು ನೀಡುವ ಹಸು ಕರುಗಳು, ಒಡವೆಗಳು ಮತ್ತು ಊಳಿಗದವರ" ಎಂದು ಸ್ಪಷ್ಟಪಡಿಸುತ್ತಾರೆ. ಸ್ಮೃತಿಕಾರರ ಪ್ರಕಾರ ಶುಲ್ಕವೆಂದರೆ ಎರಡರ್ಥದಲ್ಲಿ ವ್ಯಕ್ತವಾಗುತ್ತದೆ, 1) ಹುಡುಗಿಯ ಪೋಷಕರಿಗೆ ಹುಡುಗಿಯ ಬೆಲೆಯೆಂದು ಹೇಳಿ ಕೊಡುವುದು. ಇದು ಹುಡುಗಿಯ ಸಾವಿನ ನಂತರ ಅವಳ ತಾಯಿ ಮತ್ತು ಸೋದರನಿಗೆ ಸೇರುತ್ತದೆ. 2) ವರನಿಂದ ಹುಡುಗಿಗಾಗಿ ಕೊಡುವ ಆಭರಣಗಳು ಮತ್ತು ಗೃಹ ಅಗತ್ಯದ ವಸ್ತುಗಳು.

ವಧು ದಕ್ಷಿಣೆಯಾಗಿ ಪದ್ಧತಿಗೆ ಬಂದ "ಕನ್ಯಾಶುಲ್ಕ"ದ ಸ್ವರೂಪವನ್ನು ಮನು ಮತ್ತು ಅವನ ನಂತರದ ಉಳಿದವರು ಕಟುವಾಗಿ ಟೀಕಿಸಿದ್ದಾರೆ. ಒಂದಲ್ಲ ಒಂದು ರೀತಿಯಲ್ಲಿ ಕನ್ಯಾ ಶುಲ್ಕದ ಪದ್ಧತಿ 1920 ಅಥವಾ 1930ರ ಸುಮಾರವರಿಗೆ ಬ್ರಾಹ್ಮಣರಲ್ಲೂ, 1949 ಅಥವಾ 1950ರ ಸುಮಾರವರಿಗೆ ಲಿಂಗಾಯತ, ಮರಾಠರಲ್ಲೂ ಮತ್ತು ಉಳಿದ ಕೆಳಜಾತಿಯ ಪಂಗಡಗಳಲ್ಲೂ ಕನ್ಯಾ ಶುಲ್ಕದ ಪದ್ಧತಿಯೇ ರೂಢಿಯಲ್ಲಿತ್ತು. "ಸ್ತ್ರೀಧನ" ವಿಲ್ಲದೆ ಮದುವೆ ನಡೆಯುತ್ತಿದ್ದುದು ಅಪರೂಪವಾಗಿತ್ತು. ಸ್ತ್ರೀಧನ ಕೊಡಲಾಗದೆ ಅವಿವಾಹಿತರಾಗಿಯೇ ಉಳಿದ ಪುರುಷರೆಷ್ಟೋ ಮಂದಿ.

ಆಧುನಿಕ ಭಾರತದಲ್ಲಿ ವರದಕ್ಷಿಣೆ ಬೃಹತ್ ಸಮಸ್ಯೆಯಾಗಿದೆ. ಆ ಪದದ ಅರ್ಥವ್ಯಾಪ್ತಿಯನ್ನು ಮೀರಿ ಬೆಳೆದಿದೆ. ಕನ್ಯಾದಾನವನ್ನು ಮಾಡುವಾಗ ಜೊತೆಯಲ್ಲಿ ನೀಡುವ ದಕ್ಷಿಣೆಯೇ ವರದಕ್ಷಿಣೆ. "ವರದಕ್ಷಿಣೆ" ಯೆಂಬ

(15ನೇ ಪುಟಕ್ಕೆ)

# ಸ್ತ್ರೀಪರ ಚಿಂತನೆಯ ಚಿಗುರು

## ವಿಜಯಾ ದಬ್ಬೆ ಅವರ 'ಮಹಿಳೆ, ಸಾಹಿತ್ಯ, ಸಮಾಜ' : ಒಂದು ಪರಿಚಯ

ನಿರ್ದಿಷ್ಟ ಸ್ತ್ರೀಪರ ನೆಲೆಯಿಂದ ಚಿಮ್ಮುವ ವಿಜಯಾ ಅವರ ಈ ವಿಮರ್ಶಾ ಲೇಖನಗಳು ಕನ್ನಡ ಸಾಹಿತ್ಯ ವಿಮರ್ಶೆಗೆ ಹೊಸ ತಿರುವನ್ನು ನೀಡಿವೆ. ಸಾಹಿತ್ಯ ವಿಮರ್ಶೆಯು ಕೃತಿಯ ವಸ್ತು, ಆಕಾರ, ತಂತ್ರ, ಭಾಷೆ ಇವನ್ನಷ್ಟೇ ಗಮನಿಸುವ 'ಶುದ್ಧ' (ಶುಷ್ಕ) ವಿಮರ್ಶೆ ಯಾಗದೆ, ಆ ಕೃತಿಯ ಸಾಮಾಜಿಕ ಸಂದರ್ಭವನ್ನು ಗಣನೆಗೆ ತೆಗೆದುಕೊಳ್ಳುವುದರ ಪ್ರಸ್ತುತತೆಗೆ ಈ ಲೇಖನ ಗಳು ಸಾಕ್ಷಿಯಾಗಿವೆ. ಸಾಹಿತ್ಯಕ ದೃಷ್ಟಿಕೋನವೊಂದನ್ನು ರೂಪಿಸುವ ಪ್ರಭಾವದ ಎಳೆಗಳನ್ನು ಗುರುತಿಸುವುದು ಸಾಹಿತ್ಯ ವಿಶ್ಲೇಷಣೆಗೆ ಅಗತ್ಯವೆಂದು ಅಭಿಪ್ರಾಯ ಪಡುವ ವಿಜಯಾ ದಬ್ಬೆಯವರು, ಇಂಥ ವಿಶ್ಲೇಷಣೆಯ ಪರಿಣಾಮ ವಾಗಿ ಸಾಹಿತ್ಯ ಮೌಲ್ಯಮಾಪನದ ಮಾನದಂಡಗಳೂ ಬದಲಾಗುತ್ತವೆ, ಎಂದು ಸೂಚಿಸುವಂತಿದೆ. ಸ್ತ್ರೀಪರ ಅಥವಾ ಸ್ತ್ರೀವಾದಿ ದೃಷ್ಟಿಕೋನದಿಂದ ಸಾಹಿತ್ಯ ಮತ್ತು ಸಮಾಜವನ್ನು ವೀಕ್ಷಿಸುವುದರ ಮಹತ್ವವನ್ನು ಈ ಸಂಕಲನ ತೋರಿಸುತ್ತದೆ.

ಇದರ ಲೇಖನಗಳನ್ನು ಒಟ್ಟಾರೆ ನೋಡಿದಾಗ ಎರಡು, ಅಥವಾ ಮೂರು ಅಂಶಗಳು ಸ್ಪಷ್ಟವಾಗುತ್ತವೆ. ಲೇಖಕಿಯೇ ಹೇಳುವಂತೆ, "ಮಹಿಳಾ ಸಾಹಿತ್ಯದ ವೈಶಿಷ್ಟ್ಯ, ಒತ್ತುಗಳ ಸರಿಯಾದ ಗುರುತಿಸುವಿಕೆ, ವಿಶ್ಲೇಷಣೆ, ಮೌಲ್ಯಮಾಪನದ ಕೆಲಸ ಒಂದೆಡೆಯಿದ್ದರೆ, ಮಹಿಳಾ ಬರಹದ ಪರಂಪರೆ ಯನ್ನು ಗುರುತಿಸಿ ಕೊಡಿಸುವ ಹಾಗೂ ಕನ್ನಡ ಸಾಹಿತ್ಯ ವನ್ನು ಸ್ತ್ರೀಪರ ನೋಟದಿಂದ ನೋಡುವ ಅಗತ್ಯವೂ ಮತ್ತೊಂದೆಡೆ ಇದೆ" (ಪುಟ 1[illegible]1). ಈ ಮಾತಿನ ಹಿನ್ನೆಲೆ ಯಲ್ಲಿ ಇನ್ನೂ ಆಳಕ್ಕೆ ಇಳಿಯಬಹುದು.

ಮಹಿಳಾ ಸಾಹಿತ್ಯದ ವೈಶಿಷ್ಟ್ಯದ ಚಿಂತನ–ಮಂಥನಕ್ಕೆ 'ಮ. ಸಾ ಮತ್ತು ಮ. ಸಾ. ಸ: ಕೆಲವು ವಿಚಾರಗಳು' ಒಂದು ಗಮನಾರ್ಹ ಕೊಡುಗೆ. ಲೇಖನದಲ್ಲಿ ಹೇಳುವಂತೆ, ಸಮಾಜದಲ್ಲಿನ ಲಿಂಗಾಧಾರಿತ ಏಣಿ ಶ್ರೇಣಿಗೆ ಅನುಗುಣ ವಾಗಿ ಸಾಹಿತ್ಯ ಸಮ್ಮೇಳನಗಳ ಭಾಗವಾಗಿ ಹುಟ್ಟಿಕೊಂಡ 'ಮಹಿಳಾ ಗೋಷ್ಠಿ'ಗಳೂ ಅಪ್ರಾಮುಖ್ಯತೆಯ ನಿಟ್ಟುಸಿ ರಾದವು. ಇಂದಿನ ಮಹಿಳಾ ಸಾಹಿತ್ಯ ಸಮ್ಮೇಳನಗಳು ಅಂಥ ಗೋಷ್ಠಿಗಳ ಇನ್ನೊಂದು ರೂಪವಷ್ಟೇ. ಆದರೂ ಮಹಿಳಾ ಸಾಹಿತ್ಯದ ವಿಶಿಷ್ಟತೆಯ ಬಗೆಗಿನ ಪ್ರಶ್ನೆಗಳು ಉದ್ಭವವಾಗಲು ಈ ಮಹಿಳಾ ಸಮ್ಮೇಳನಗಳು ಸಂದರ್ಭ ವನ್ನು ಒದಗಿಸಿವೆ. ಮಹಿಳಾ ಸಾಹಿತ್ಯದ 'ಪ್ರತ್ಯೇಕತೆ'ಯ ನೆಲೆಯನ್ನು ಸ್ತ್ರೀ ಪರ ನಿಲುವಿನಿಂದ ಅರ್ಥೈಸಿದಾಗ ಮಾತ್ರ ಮಹಿಳಾ ಸಾಹಿತ್ಯ ಸಮ್ಮೇಳನಗಳು ಹೆಚ್ಚು ಅರ್ಥಪೂರ್ಣ ವಾಗಲು ಸಾಧ್ಯ ಎನ್ನುತ್ತಾರೆ ಲೇಖಕಿ. ಅಲ್ಲದೆ, "ಮಹಿಳಾ ಸಾಹಿತ್ಯ ಮತ್ತು ಸಾಹಿತ್ಯವನ್ನು ನೋಡುವ ಮಹಿಳಾ ದೃಷ್ಟಿ–ಇವು ಮಹಿಳಾ ಸಾಹಿತ್ಯ ಸಮ್ಮೇಳನಗಳೆಂಬ ಪ್ರತ್ಯೇಕ ಸಮ್ಮೇಳನಗಳ ಇರವಿಗೆ ಅರ್ಥ ತುಂಬ ಬೇಕಾಗಿದೆ" (ಪು. 106) ಎಂದು ಅಭಿಪ್ರಾಯ ಪಟ್ಟಿದ್ದಾರೆ.

○ ಸೀಮಂತಿನಿ ನಿರಂಜನ

ಮಹಿಳಾ ಸಂವೇದನೆ ಎಂಬುದು ಮಹಿಳಾ ಸಾಹಿತ್ಯದ ಪ್ರಮುಖ ನೆಲೆಯಾದ್ದರಿಂದ, ಅದರ ವಿಶಿಷ್ಟ ಅಂಶಗಳನ್ನು ಕಾಣಿಸುವುದು ಅಗತ್ಯ. ಮಹಿಳಾ ಸಂವೇದನೆಯ ಸ್ವರೂಪ ಇಂದು ಬಹಳಷ್ಟು ಚರ್ಚೆಗೆ ಒಳಗಾಗಿದ್ದರೂ ಅದನ್ನು ಖಚಿತವಾಗಿ ಬೇರ್ಪಡಿಸಲು ಸಾಧ್ಯವಾಗಿಲ್ಲ. ಬದುಕನ್ನು ಗ್ರಹಿಸುವ, ಸ್ಪಂದಿಸುವ ಮಹಿಳೆಯ ದೃಷ್ಟಿ 'ಭಿನ್ನ' ಎಂದಷ್ಟೇ ಗುರುತಿಸಲಾಗಿದೆ. ಆದರೆ ಆ ಭಿನ್ನತೆಯು ಆಕಾರ ಮತ್ತು ಬಣ್ಣವನ್ನು ಇನ್ನೂ ಪಡೆದಿಲ್ಲ. ಮಹಿಳಾ ಸಾಹಿತಿಗಳು ತಮ್ಮ ಒರವಣಿಗೆಯಲ್ಲಿ ಎದುರಿಸುತ್ತಿರುವ ಮುಖ್ಯ ತೊಂದರೆಗಳನ್ನೂ ಮೇಲೆ ಉದ್ಧರಿಸಿದ ಲೇಖನ ಪ್ರಸ್ತಾಪಿಸುತ್ತದೆ. ಮೊದಲನೆಯದಾಗಿ, ಎಷ್ಟೋ ವರ್ಷ ಗಳಿಂದ ಸುಪ್ತವಾಗಿದ್ದ ಮಹಿಳೆಯರ ಅಭಿವ್ಯಕ್ತಿ ವಿಕಸನ

... ಬಳಸುವ ರೀತಿಯಲ್ಲಿ, ... ಸಾಕಷ್ಟು ಪ್ರೌಢಿಮೆ ಗಳಿಸಿಲ್ಲ. ... 'ಗಂಡಸಿನ ಪ್ರಪಂಚ'ವನ್ನು ತಾನು ...ಅನುಭವಿಸಲು ಸಾಮಾಜಿಕ ಅಡಚಣೆಗಳಿರು...ದ, ಆ ಲೋಕವನ್ನು ಮಹಿಳಾ ಸಾಹಿತಿ ಸಮರ್ಥಕವಾಗಿ ಚಿತ್ರಿಸಲಾರಳು. ಮಹಿಳಾ ಸಾಹಿತ್ಯದ 'ಮೌಲಿಕತೆ'ಯ ಪ್ರಶ್ನೆಯನ್ನೂ ಇಲ್ಲಿ ಎತ್ತಲಾಗಿದೆ. ಯಾವ ಸಾಮಾಜಿಕ ಮೌಲ್ಯಗಳು ಮಹಿಳಾ ಸಾಹಿತ್ಯವನ್ನು ರೂಪಿಸಿ, ಆ ಬರವಣಿಗೆಯಲ್ಲಿ ಬಿಂಬಿತವಾಗುತ್ತಿವೆ? ಪ್ರಚಲಿತ ಮೌಲ್ಯಗಳ ಉರಿಯಲ್ಲಿ ತಯಾರಾದ, ತನ್ನದಲ್ಲದ "ಸಿದ್ಧ ಮಾದರಿಗಳ ಪ್ರಭಾವದಿಂದ ಮುಕ್ತವಾಗಿ ಮಹಿಳೆಯ ತುಡಿತದಿಂದಲೇ ಅವಳ ಸಾಹಿತ್ಯ" (ಪು. 111) ಸೃಷ್ಟಿಯಾಗಬೇಕು.

"ಮಹಿಳೆಯ ದೇಹ ಮತ್ತು ಮನಸ್ಸನ್ನು ಪುರುಷಾಧೀನವಾಗಿಸಿದ, ಅವರ ದುಡಿಮೆ ಮತ್ತು ತಾಯ್ತನದ ಹಕ್ಕನ್ನು ತನ್ನ ಹತೋಟಿಯಲ್ಲಿಟ್ಟುಕೊಂಡ ವ್ಯವಸ್ಥೆ" (ಪು. 1) ಅವಳ ಪ್ರತಿಭಟನೆಯ ದನಿಯನ್ನು ದಮನ ಮಾಡುತ್ತಲೇ ಬಂದಿದೆ. ಇಂಥ ಪರಿಸ್ಥಿತಿಯಲ್ಲಿ "ಬಂಡಾಯ ಬಂದು ಮೌಲ್ಯವಾಗಿ ಒಳಗಿಳಿದು ಬದುಕಿನೊಳಗಿಂದ ಸಾಹಿತ್ಯವಾಗಿ" (ಪು. 17 – 18) ರೂಪುಗೊಳ್ಳುವ ದಾರಿ ನಿಡಿದಾದದ್ದು. ಮಹಿಳಾ ಸಾಹಿತ್ಯದಲ್ಲಿ ಪ್ರತಿಭಟನೆ ಇತ್ತೀಚೆಗೆ ಕಂಡುಬರುತ್ತಿರುವ ಅಂಶ ಎನ್ನುವ ಮಾತನ್ನು ನಾವು ಚರಿತ್ರೆಯ ಹಿನ್ನೆಲೆಯಲ್ಲಿ ಸಂಧಿಸಿದಾಗ, 'ಪ್ರತಿಭಟನೆ' ಎನ್ನುವುದು ಕಾಲ ಮತ್ತು ಸಂದರ್ಭಕ್ಕೆ ಅನುಗುಣವಾಗಿ ಬದಲಾಗುತ್ತ ಬಂದಿದೆ ಎಂಬುದು ಅರಿವಾಗುತ್ತದೆ. ಪ್ರತಿಭಟನೆಯ ತುಡಿತ ಹಿಂದಿನ ಲೇಖಕಿಯರಲ್ಲಿ ಇರಲಿಲ್ಲ ಎನ್ನುವುದಕ್ಕಿಂತ, "(ಅ)ವರ ಪ್ರತಿಭಟನೆಯ ಸಂಗತಿ, ಕಾರಣ, ಸ್ವರೂಪವು ಭಿನ್ನವಾಗಿರುವುದು ಸಹಜ" (ಪು. 2) ಎಂದು ವಿಜಯಾ ಅವರು ಸ್ಥಾಪಿಸುತ್ತಾರೆ. ಮಹಿಳಾ ಸಾಹಿತ್ಯದಲ್ಲಿನ ಪ್ರತಿಭಟನೆಯ ದನಿಗಳನ್ನು ದಾಖಲಿಸಲು ಅವರು ವಚನಪೂರ್ವಯುಗ, ವಚನಯುಗ ಮತ್ತು ಹೊಸಗನ್ನಡ ಲೇಖಕಿಯರ ಸಾಹಿತ್ಯವನ್ನು ಸ್ಥೂಲವಾಗಿ ಪ್ರಸ್ತಾಪಿಸಿದ್ದಾರೆ. ಮಹಿಳಾ ಸಾಹಿತ್ಯದಲ್ಲಿ, ಸುಧಾರಣವಾದಿ ನೆಲೆಯಿಂದ ಹಿಡಿದು, ಸ್ಥಾಪಿತ ಮೌಲ್ಯಗಳ ಖಂಡನೆ ಮತ್ತು 'ವೈಯಕ್ತಿಕತೆಯ ಸ್ಥಾಪನೆಯ ಯತ್ನ'ದ ವರೆಗೆ, ಯಾವ "ಪ್ರತಿಭಟನೆಯ ಮಾದರಿಗಳೂ ಆಮದಾಗಿಲ್ಲ. ಯಾತನೆ, ಸಂಘರ್ಷದಲ್ಲೇ ಹುಟ್ಟುತ್ತವೆ" (ಪು 18) ಎಂದು ತೋರಿಸಿದ್ದಾರೆ.

★ ★ ★

ಮಹಿಳಾ ಬರಹದ ಪರಂಪರೆಯನ್ನು ಗುರುತಿಸುವುದು, ನಿರ್ಮಿಸುವುದು, ವಿಜಯಾ ಅವರು ಕೈಗೊಂಡಿರುವ ಮತ್ತೊಂದು ಮುಖ್ಯವಾದ ಕೆಲಸ. ಈ ಪರಂಪರೆಯಲ್ಲಿ ನಾವು ವಿವಿಧ ಹಂತಗಳನ್ನು ಗುರುತಿಸುವುದು ಸಾಧ್ಯವಾದರೂ ಅವುಗಳ ಹಿಂದಿರುವ ಅಚಲವಾದ ಸ್ತ್ರೀಪರ ನಿಲುವನ್ನು ಬದಿಗೊತ್ತಲು ಸಾಧ್ಯವಿಲ್ಲ. ಸಂಕಲಿತ ಲೇಖನಗಳಲ್ಲಿ ಕೆಲವನ್ನು ಎರಡು ಗುಂಪುಗಳಾಗಿ ವಿಭಾಗಿಸಬಹುದು: ಸುಧಾರಣೆಯ ಅಲೆ ಒಂದಾದರೆ, ಉದಾರವಾದಿ ದೃಷ್ಟಿಕೋನ ಹೊತ್ತ ಸಾಹಿತ್ಯ ಮತ್ತೊಂದೆಡೆ.

ಈ ಶತಮಾನದ ಆರಂಭದಲ್ಲಿ ಬರವಣಿಗೆ ಪ್ರಾರಂಭಿಸಿದ ಲೇಖಕಿ (ಅವರು ಸಂಪಾದಕಿ, ಪ್ರಕಾಶಕಿ ಕೂಡ ಆಗಿದ್ದರು) ನಂಜನಗೂಡು ತಿರುಮಲಾಂಬ ಅವರ ಕೊಡುಗೆ ಇಂದು ಚಾರಿತ್ರಿಕ ಮಹತ್ವವನ್ನೊಳಗೊಂಡಿದೆ. ಅಂದಿನ ಸುಧಾರಣಾವಾದಿಗಳ ಆಲೋಚನೆಗಳನ್ನು ಪ್ರತಿನಿಧಿಸುವ ಅವರ ಬರಹದ ವಸ್ತು ವಿಧವಾ ಸಮಸ್ಯೆ, ಬಾಲ್ಯವಿವಾಹ ಮುಂತಾದ ಸಾಮಾಜಿಕ ಸಮಸ್ಯೆಗಳಾಗಿದ್ದವು. ಆ ಸಮಸ್ಯೆಗಳ ವಿಶ್ಲೇಷಣೆ ಇಂದು ನಮಗೆ ಸಾಂಪ್ರದಾಯಿಕವಾಗಿ ತೋರಬಹುದು. ಆದರೆ, ವಿಜಯಾ ಅವರು ಹೇಳುವಂತೆ, ಅಂಥ ಸಮಸ್ಯೆಗಳನ್ನು "ಅವರು ಗುರುತಿಸಿದ್ದು ಹಾಗೂ ಸ್ತ್ರೀ ಸತ್ತ್ವದ ಪರವಾಗಿ ದನಿಯೆತ್ತಿದ್ದು ಐತಿಹಾಸಿಕವಾಗಿ ಬಹಳ ಮುಖ್ಯವಾದ ಸಂಗತಿ" (ಪು. 38). ಸ್ತ್ರೀ ಶಿಕ್ಷಣದ ಅಗತ್ಯವನ್ನು ಅವರು ಒತ್ತಿ ಹೇಳಿದರೂ, ಅದರ ಸ್ವರೂಪದ ಚಿಂತನೆ ಅಂದಿನ ಸುಧಾರಣಾವಾದಿಗಳದಕ್ಕಿಂತ ಭಿನ್ನವಾಗಿರಲಿಲ್ಲ. "ಸದ್ಗೃಹಿಣಿತ್ವಕ್ಕಾಗಿ ಅಕ್ಷರಜ್ಞಾನ, ಮಾತೃತ್ವಕ್ಕಾಗಿಯೇ ಅವಳ ಮಾನಸಿಕ ಬೆಳವಣಿಗೆಯ ಅಗತ್ಯವಿದೆಯೆಂದು ಪ್ರತಿಪಾದಿಸಲಾಯಿತು." (ಪು 41)

ಪತ್ರಕರ್ತೆಯಾಗಿ ಸರಸ್ವತಿಬಾಯಿ ರಾಜವಾಡೆ ಅವರು ಮಹಿಳೆಯರಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಪ್ರಸ್ತಾಪಿಸಿದರು. ಅವರು ಪ್ರಾರಂಭಿಸಿದ 'ಸುಪ್ರಭಾತ' ಪತ್ರಿಕೆಯು ಮಹಿಳಾ ಸಾಹಿತ್ಯಕ್ಕೆ ಉತ್ತೇಜನ ನೀಡಲೆಂದೇ ಆರಂಭವಾಯಿತು. "ಕೇವಲ ಪುರುಷರಚಿತ ಸಾಹಿತ್ಯದಿಂದ

ಸಮಾಜದ ಆತ್ಮದರ್ಶನವಾಗಲಾರದು, ಸ್ತ್ರೀಯರೂ ಈ ಕ್ಷೇತ್ರದಲ್ಲಿ ಪರಿಶ್ರಮಿಸಬೇಕು. ಆದರೆ ಅವರ ಉತ್ಸಾಹ, ಪರಿಶ್ರಮಕ್ಕೆ ತಕ್ಕ ಪ್ರೋತ್ಸಾಹವಿಲ್ಲ, ಪ್ರಕಟಿಸುವವರಿಲ್ಲ" (ಪು. 95) ಎಂಬ ಅರಿವು 'ಸುಪ್ರಭಾತ'ದ ಹಿಂದಿನ ಗ್ರಹಿಕೆಯಾಗಿತ್ತು. ಅವರ 'ಸ್ತ್ರೀಪರ' ನಿಲುವಿನ ಮಿತಿಗಳೇನೇ ಇದ್ದರೂ, ಅವರ ಸಂಪಾದಕೀಯಗಳು, ಲೇಖನಗಳು ಮತ್ತು ಇತರ ಬರಹಗಳ ಮೂಲಕ, ಮಹಿಳೆಯರ ಪ್ರಗತಿಯ ಬಗೆಗಿನ ಅವರ ಕಾಳಜಿ ಹಾಗು ಚಿಂತನೆ ಸ್ಪಷ್ಟವಾಗಿ ಮೂಡಿಬಂದಿದೆ.

ಮುಂದಿನ ತಲೆಮಾರಿನ ಲೇಖಕಿಯರೊಡನೆ, ವಿಶಿಷ್ಟ ಸ್ತ್ರೀ ದೃಷ್ಟಿಕೋನವನ್ನು ಸಾಹಿತ್ಯದಲ್ಲಿ ಪ್ರತಿನಿಧಿಸುವ ಪ್ರಯತ್ನವೂ ಕಾಲಿಟ್ಟಿತು. ಸ್ತ್ರೀತ್ವದ ಈ ಎಚ್ಚರವನ್ನು ಉದಾರವಾದಿ ನೆಲೆಯಿಂದ ವಿಶ್ಲೇಷಿಸಲಾಯಿತು ಎನ್ನುವುದು ಗಮನಾರ್ಹ. ತ್ರಿವೇಣಿಯವರ ಬರಹ ಇಂಥ ಚಿಂತನೆಯನ್ನು ಪ್ರತಿಬಿಂಬಿಸುತ್ತದೆ. "ಸ್ಪಷ್ಟ ಸ್ತ್ರೀಪರ ದನಿ, ದ್ವಿಸ್ತರನ್ಯಾಯ ವಿರೋಧ, ಮನೋ ವಿಶ್ಲೇಷಣಾ ಸಿದ್ಧಾಂತದ ಹಿನ್ನೆಲೆಯಲ್ಲಿ ಮೂಡಿಬಂದ ಉದಾರವಾದಿ ನೆಲೆ, ಮಹಿಳೆಗೆ ವಿದ್ಯೆಯ ಅಗತ್ಯದ ಪ್ರತಿಪಾದನೆ.... ಮಹಿಳೆಯರ ವಿಶಿಷ್ಟ ಜೀವನ ಸಂದರ್ಭ ಮತ್ತು ಅನುಭವಗಳನ್ನು ಪ್ರತಿಬಿಂಬಿಸುವಿಕೆ" (ಪು. 48) ಇವುಗಳಿಂದ ತ್ರಿವೇಣಿ ಅವರ ಸಾಹಿತ್ಯ ಮುಖ್ಯವಾಗುತ್ತದೆ ಎನ್ನುವ ವಿಜಯಾ ಅವರು, ಮಹಿಳಾ ಸಾಹಿತ್ಯದ ಪರಂಪರೆಯನ್ನು ನಿರ್ಮಿಸುವಾಗ ಚಾರಿತ್ರಿಕ ಮಹತ್ವದ ಜತೆಗೆ ಆ ಬರಹದ ಪ್ರಸ್ತುತತೆಯನ್ನು ಗಮನಿಸಬೇಕೆಂದು ಸೂಚಿಸುತ್ತಾರೆ.

ಈ ಚರ್ಚೆಯ ಸಂದರ್ಭದಲ್ಲಿ 'ಹೊನ್ನಮ್ಮನ ಕಿವಿಮಾತಿಗೆ ಒಂದು ಪ್ರತಿಕ್ರಿಯೆ' ಕೂಡ ಮುಖ್ಯವಾಗಿದೆ. ಹೆಸರಾಂತ ಬರಹಗಾರ್ತಿಯಾಗಿದ್ದರೂ ಹೊನ್ನಮ್ಮ ಪ್ರತಿಪಾದಿಸುವ ಮೌಲ್ಯಗಳು (ಉದಾಹರಣೆಗೆ, ಪುರುಷ-ಸ್ತ್ರೀಯರ ನಡುವಣ ಸಂಬಂಧವನ್ನು ಒಡೆಯ ಮತ್ತು ತೊತ್ತಿನ ಸಂಬಂಧವಾಗಿಸುವುದು) ಮತ್ತು ಆ ಕಾಲದ ಸಮಾಜ ಸ್ಥಾಪಿಸಿದ ಮೌಲ್ಯಗಳು ಇಂದು ನಮಗೆ ಅರ್ಥಹೀನವಾದವು ಎನ್ನುತ್ತಾರೆ ಲೇಖಕಿ.

★ ★ ★

ಸಂಕಲನದ ಇನ್ನೂ ಕೆಲವು ಲೇಖನಗಳು ಕನ್ನಡ ಸಾಹಿತ್ಯವನ್ನು ಸ್ತ್ರೀಪರ ನೋಟದಿಂದ ಕಾಣುವ ಯತ್ನ ಎಂದು ಹೇಳಬಹುದು. ಕಾರಂತರ ಕಾದಂಬರಿಗಳಲ್ಲಿ ನಮ್ಮನ್ನು ಎದುರಾಗುವ ಗ್ರಾಮೀಣ ಮಹಿಳೆಯರು, ಅವರ ಬದುಕಿನ ಸ್ವರೂಪ-ಮೌಲ್ಯಗಳನ್ನು ಶೋಧಿಸಲಾಗಿದೆ. ಜಾತಿ ಮತ್ತು ವರ್ಗಾಧಾರಿತ ಅಸಮಾನತೆಗಳ ಜತೆಯಲ್ಲಿ ಹೆಣೆದುಕೊಂಡಿರುವ ಲಿಂಗಾಧಾರಿತ ಅಸಮಾನತೆಯ ನೆಲೆಯನ್ನು ವಿಶ್ಲೇಷಿಸುವಲ್ಲಿ, ನಿರಂಜನರ ಕೃತಿಗಳಲ್ಲಿ ಕಾಣುವ 'ಪ್ರಗತಿಪರ' ಧೋರಣೆಯನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ, ಚದುರಂಗರ 'ವೈಶಾಖ'ದ ಜಾತಿ ಮತ್ತು ವರ್ಗಗಳಲ್ಲಿ ಮಹಿಳೆಯ ಬದುಕು ಮೂಡಿ ಬಂದಿರುವುದನ್ನೂ ವಿಜಯಾ ಅವರು ಕೊಚ್ಚಿನೋಡಿದ್ದಾರೆ.

★ ★ ★

ಸಾಮಾಜಿಕ ಚಿಂತನೆಯ ತಲೆ ಬರಹದಡಿಯಲ್ಲಿ ಕೆಲವು ಮುಖ್ಯ ಲೇಖನಗಳನ್ನು ಪರಿಶೀಲಿಸಬಹುದು. ಸಮಾಜದಲ್ಲಿನ ಲಿಂಗಾಧಾರಿತ ಅಸಮಾನತೆಗಳನ್ನು ತೊಡೆದು ಹಾಕಿ, 'ಗಂಡಸಿಗಿಂತ ಹೆಂಗಸು ಕೀಳು' ಎಂಬ ಮನೋಭಾವವನ್ನು ಬೇರು ಸಮೇತ ಕಿತ್ತೊಗೆಯುವುದು ಮಹಿಳಾ ಚಳವಳಿಯ ಗುರಿ. ಮೌಲ್ಯಗಳಲ್ಲಿ ಮತ್ತು ವಿಚಾರಗಳ ನೆಲೆಯಲ್ಲಿ ಬದಲಾವಣೆ ತರುವುದರಲ್ಲಿ ಶಿಕ್ಷಣ ಮುಖ್ಯ ಪಾತ್ರವಹಿಸುತ್ತದೆ. ಆದ್ದರಿಂದಲೇ ಮಹಿಳಾ ಆಂದೋಲನವು ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣದತ್ತ ಗಮನ ಹರಿಸಬೇಕು ಎನ್ನುವುದು ಲೇಖಕಿಯ ಸೂಚನೆ. ಪದ್ಯಗಳಲ್ಲಿ, ಬೋಧಿಸುವ ಕ್ರಮದಲ್ಲಿ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ "ಲಿಂಗಾಧಾರಿತ ಶ್ರೇಣಿಗಳುಳ್ಳ ಸಮಾಜದ ಧೋರಣೆಗಳು.... ಮುಂದುವರಿಯುವುದು ನಿಲ್ಲಬೇಕಾಗಿದೆ" (ಪು. 114).

ಮಹಿಳೆಯರಿಗೆ ಸಂಬಂಧಿಸಿದ್ದ ಸಾಮಾಜಿಕ ಮೌಲ್ಯಗಳು ಯಾವ ಬುನಾದಿಯ ಮೇಲೆ ನಿಂತಿವೆ ? ಅವುಗಳಲ್ಲಿ ಬದಲಾವಣೆ ತರಲು ಪ್ರಯತ್ನಗಳು ವೈಯಕ್ತಿಕ ನೆಲೆಯಲ್ಲಿ ಆರಂಭವಾಗಬೇಕೋ ಅಥವಾ ಸಾಮಾಜಿಕ ಸ್ತರದಲ್ಲೋ? ಈ ಬದಲಾವಣೆಯಲ್ಲಿ ಮಹಿಳೆಯರ ಪಾತ್ರ ಏನಾಗಿದೆ/ಆಗಬೇಕು ? ಮುಂತಾದ ಪ್ರಶ್ನೆಗಳನ್ನೂ ಎತ್ತಿದ್ದಾರೆ.

ಹೆಣ್ಣನ್ನು ಜಾಹಿರಾತುಗಳು ಬಳಸಿಕೊಳ್ಳುವ ರೀತಿಯ ಮತ್ತು ಅದರ ಬಗ್ಗೆ ವ್ಯಕ್ತವಾಗಿರುವ ವಿರೋಧಗಳ ಹಿನ್ನೆಲೆಯಲ್ಲಿ ಕೆಲವು ಅಂಶಗಳನ್ನು ಲೇಖಕಿ ಗುರುತಿಸಿದ್ದಾರೆ. ಹೆಣ್ಣಿನ ದೈಹಿಕ ಆಕರ್ಷಣೆಯನ್ನು ಮಾತ್ರ ಒತ್ತಿ

ಹೇಳುವುದರಿಂದ ಅವಳ 'ಸಮಗ್ರ ವ್ಯಕ್ತಿತ್ವ'ವನ್ನು ಅಲ್ಲಗಳೆಯುತ್ತದೆ ಎನ್ನುವುದು ಈ ವಿರೋಧದ ಮೂಲ. ಸಮಾಜದಲ್ಲಿನ ಅವಳ ಪಾತ್ರದ ಬಗೆಗೆ ಅದು ಪೋಷಿಸುವ ಅರಚನಾತ್ಮಕ ಧೋರಣೆಯನ್ನೂ ವಿರೋಧಿಸಲಾಗಿದೆ. ಆದರೆ, ಜಾಹಿರಾತುಗಳ ಹಿಂದಿನ ವಸ್ತುಸ್ಥಿತಿ ಬದಲಾಗದೆ, ಅವು ಹೆಣ್ಣನ್ನು ಬಳಸಿಕೊಳ್ಳುವ ರೀತಿ ಬದಲಾಗದು.

ನಮ್ಮ ಸಮಾಜದಲ್ಲಿ ಹೆಣ್ಣಿನ ಮೇಲಾಗುವ ದಬ್ಬಾಳಿಕೆ ಕೇವಲ ನೈತಿಕ ವಸ್ತುಸ್ಥಿತಿಗೆ ಸಂಬಂಧಿಸಿದ್ದಲ್ಲ. ಅದಕ್ಕೆ ಸಾಮಾಜಿಕ, ಐತಿಹಾಸಿಕ ಕಾರಣಗಳಿವೆ. ಉತ್ಪಾದನಾ ಕ್ಷೇತ್ರದಲ್ಲಿ ಅವಳು ನಿರ್ವಹಿಸುವ / ನಿರ್ವಹಿಸದಿರುವ ಕಾರ್ಯಗಳು ಅವಳನ್ನು ಕೀಳು ಸ್ಥಾನಕ್ಕೆ ತಳ್ಳಿದೆ. ವರದಕ್ಷಿಣೆಯಂಥ ಸಮಸ್ಯೆಯ ಬೇರನ್ನು ಇಲ್ಲೇ ಹುಡುಕಬಹುದು. ಇದನ್ನು ಕಂಡುಕೊಂಡ ಗಾಂಧೀಜಿ "ಆರ್ಥಿಕ ಅವಲಂಬನೆ, ತತ್ಪರಿಣಾಮವಾದ ದಾಸ್ಯ ಮನೋಭಾವವನ್ನು ನಿರ್ಮೂಲ ಮಾಡಲು ಕರೆಯಿತ್ತಿದ್ದಾರೆ" (ಪು.120). ವರದಕ್ಷಿಣೆಯ ಸಮಸ್ಯೆಯ ಬಗೆಗೆ ಗಾಂಧೀಜಿ ಆಡಿದ ಮಾತು ಇಂದಿಗೂ ಅನ್ವಯವಾಗುತ್ತದೆ ಎಂದು ಲೇಖಕಿ ತೋರಿಸಿಕೊಟ್ಟಿದ್ದಾರೆ.

★ ★ ★

ಸಾಹಿತ್ಯವನ್ನಾಗಲಿ, ಚರಿತ್ರೆಯನ್ನಾಗಲಿ, ಸಾಮಾಜಿಕ ರಚನೆಯನ್ನಾಗಲಿ ಹೊಸ ದೃಷ್ಟಿಕೋನದಿಂದ ವೀಕ್ಷಿಸಿದಾಗ ಅವುಗಳ ಸ್ವರೂಪವೇ ಬದಲಾಗುತ್ತದೆ. ಸ್ತ್ರೀ ಪರ ದೃಷ್ಟಿಕೋನ ಇಂಥದೊಂದು ವಿಮರ್ಶಾತ್ಮಕ ನೆಲೆ. 'ಅಕ್ಕನ ಸಂಪಾದನೆ'ಗಳನ್ನು ಪರಿಶೀಲಿಸುತ್ತ ವಿಜಯಾ ಅವರು ಹೀಗೆ ಬರೆದಿದ್ದಾರೆ :

"ಶೂನ್ಯಸಂಪಾದನೆಗಳಲ್ಲಿನ 'ಅಕ್ಕನ ಸಂಪಾದನೆ'ಗಳು ಅಕ್ಕನ ಜೀವನದ ಹಿನ್ನೆಲೆ, ಅನುಭಾವಿಕತೆಯನ್ನು ಅನಂತರದ ಶತಮಾನಗಳು ಗ್ರಹಿಸಿದ, ಅರ್ಥೈಸಿದ ಕೆಲವು ರೀತಿಗಳನ್ನು ಕಾಣಿಸುತ್ತವೆ. ಆಯಾ ಸಂಪಾದನಕಾರರ ಸಂದರ್ಭ, ದೃಷ್ಟಿಕೋನ, ಶಕ್ತಿ, ಆಸಕ್ತಿಗಳಿಗನುಗುಣವಾಗಿ ಈ ಪ್ರಸಂಗದಲ್ಲಿ ಲೋಪ, ಪ್ರಕ್ಷೇಪ, ವ್ಯತ್ಯಾಸಗಳು ಆಗಿವೆ" (ಪು. 93).

ಒಬ್ಬ ವ್ಯಕ್ತಿ ಮತ್ತು ಅವಳ ಸಾಹಿತ್ಯದ ಬಗ್ಗೆ ಮೂಡುವ ಇಂಥ ವಿಭಿನ್ನ ಪ್ರತಿಪಾದನೆಗಳು ಧ್ವನಿಸುವ ಅನೇಕ ಪ್ರಶ್ನೆಗಳನ್ನು ವಿಮರ್ಶಿಸುವುದು ಅತ್ಯಗತ್ಯ. ಹಾಗೆ ಮಾಡಿದಾಗ ಹೆಣ್ಣು ಮತ್ತು ಹೆಣ್ಣುತನದ ಬಗ್ಗೆ ಸಾಹಿತ್ಯ ಸಮಾಜಗಳಲ್ಲಿ ಪ್ರಚಲಿತವಾಗಿರುವ ವಿಚಾರಗಳು ಸ್ಪಷ್ಟವಾಗುತ್ತವೆ. ಸಾಹಿತ್ಯಕ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ನಡೆದ/ನಡೆದಿರುವ ಸಂವಾದಗಳನ್ನು ಸ್ತ್ರೀಪರ ನಿಲುವಿನಿಂದ ಪರಿಶೀಲಿಸಿದಾಗ, ಮಹಿಳೆಯ 'ಸಂವೇದನೆ', 'ಆಧ್ಯಾತ್ಮಿಕತೆ', 'ಲೈಂಗಿಕತೆ', 'ಮಾತೃತ್ವ' ಇತ್ಯಾದಿಗಳ ಬಗೆಗಿನ ಅನೇಕ ಎಳೆಗಳು ಗೋಚರವಾಗುತ್ತವೆ. ಇಂಥ ಪ್ರಸಂಗಗಳನ್ನು (discourses) ವಿಶ್ಲೇಷಿಸಿ ವಿಜಯಾ ಅವರ ವಿಮರ್ಶಾಲೇಖನಗಳು ಈಗಾಗಲೇ ರೂಪಗೊಳ್ಳುತ್ತಿರುವ ಪರ್ಯಾಯ ಪ್ರಸಂಗಕ್ಕೆ ಗಮನಾರ್ಹ ಕೊಡುಗೆಯಾಗಿದೆ. ○

---



---

# ಸ್ತ್ರೀಪರ ಚಿಂತನೆಯ ಚಿಗುರು

## ವಿಜಯಾ ದಬ್ಬೆ ಅವರ ‘ಮಹಿಳೆ, ಸಾಹಿತ್ಯ, ಸಮಾಜ’ : ಒಂದು ಪರಿಚಯ

ನಿರ್ದಿಷ್ಟ ಸ್ತ್ರೀಪರ ನೆಲೆಯಿಂದ ಚಿಮ್ಮಿದ ವಿಜಯಾ ಅವರ ಈ ವಿಮರ್ಶಾ ಲೇಖನಗಳು ಕನ್ನಡ ಸಾಹಿತ್ಯ ವಿಮರ್ಶೆಗೆ ಹೊಸ ತಿರುವನ್ನು ನೀಡಿವೆ. ಸಾಹಿತ್ಯ ವಿಮರ್ಶೆಯು ಕೃತಿಯ ವಸ್ತು, ಆಕಾರ, ತಂತ್ರ, ಭಾಷೆ ಇವನ್ನಷ್ಟೇ ಗಮನಿಸುವ ‘ಶುದ್ಧ’ (ಶುಷ್ಕ) ವಿಮರ್ಶೆಯಾಗದೆ, ಆ ಕೃತಿಯ ಸಾಮಾಜಿಕ ಸಂದರ್ಭವನ್ನು ಗಣನೆಗೆ ತೆಗೆದುಕೊಳ್ಳುವುದರ ಪ್ರಸ್ತುತತೆಗೆ ಈ ಲೇಖನಗಳು ಸಾಕ್ಷಿಯಾಗಿವೆ. ಸಾಹಿತ್ಯಕ ದೃಷ್ಟಿಕೋನವೊಂದನ್ನು ರೂಪಿಸುವ ಪ್ರಭಾವದ ಎಳೆಗಳನ್ನು ಗುರುತಿಸುವುದು ಸಾಹಿತ್ಯ ವಿಶ್ಲೇಷಣೆಗೆ ಅಗತ್ಯವೆಂದು ಅಭಿಪ್ರಾಯ ಪಡುವ ವಿಜಯಾ ದಬ್ಬೆಯವರು, ಇಂಥ ವಿಶ್ಲೇಷಣೆಯ ಪರಿಣಾಮವಾಗಿ ಸಾಹಿತ್ಯ ಮೌಲ್ಯಮಾಪನದ ಮಾನದಂಡಗಳೂ ಬದಲಾಗುತ್ತವೆ, ಎಂದು ಸೂಚಿಸುವಂತಿದೆ. ಸ್ತ್ರೀಪರ ಅಥವಾ ಸ್ತ್ರೀವಾದಿ ದೃಷ್ಟಿಕೋನದಿಂದ ಸಾಹಿತ್ಯ ಮತ್ತು ಸಮಾಜವನ್ನು ವೀಕ್ಷಿಸುವುದರ ಮಹತ್ವವನ್ನು ಈ ಸಂಕಲನ ತೋರಿಸುತ್ತದೆ.

ಇದರ ಲೇಖನಗಳನ್ನು ಒಟ್ಟಾರೆ ನೋಡಿದಾಗ ಎರಡು, ಅಥವಾ ಮೂರು ಅಂಶಗಳು ಸ್ಪಷ್ಟವಾಗುತ್ತವೆ. ಲೇಖಕಿಯೇ ಹೇಳುವಂತೆ, “ಮಹಿಳಾ ಸಾಹಿತ್ಯದ ವೈಶಿಷ್ಟ್ಯ, ಒತ್ತುಗಳ ಸರಿಯಾದ ಗುರುತಿಸುವಿಕೆ, ವಿಶ್ಲೇಷಣೆ, ಮೌಲ್ಯಮಾಪನದ ಕೆಲಸ ಒಂದೆಡೆಯಿದ್ದರೆ, ಮಹಿಳಾ ಬರಹದ ಪರಂಪರೆಯನ್ನು ಗುರುತಿಸಿ ಕೊಡಿಸುವ ಹಾಗೂ ಕನ್ನಡ ಸಾಹಿತ್ಯವನ್ನು ಸ್ತ್ರೀಪರ ನೋಟದಿಂದ ನೋಡುವ ಅಗತ್ಯವೂ ಮತ್ತೊಂದೆಡೆ ಇದೆ” (ಪುಟ 1 1 1). ಈ ಮಾತಿನ ಹಿನ್ನೆಲೆಯಲ್ಲಿ ಇನ್ನೂ ಆಳಕ್ಕೆ ಇಳಿಯಬಹುದು.

ಮಹಿಳಾ ಸಾಹಿತ್ಯದ ವೈಶಿಷ್ಟ್ಯದ ಚಿಂತನ–ಮಂಥನಕ್ಕೆ ‘ಮ. ಸಾ ಮತ್ತು ಮ. ಸಾ. ಸ: ಕೆಲವು ವಿಚಾರಗಳು’ ಒಂದು ಗಮನಾರ್ಹ ಕೊಡುಗೆ. ಲೇಖನದಲ್ಲಿ ಹೇಳುವಂತೆ, ಸಮಾಜದಲ್ಲಿನ ಲಿಂಗಾಧಾರಿತ ಏಣಿ ಶ್ರೇಣಿಗೆ ಅನುಗುಣವಾಗಿ ಸಾಹಿತ್ಯ ಸಮ್ಮೇಳನಗಳ ಭಾಗವಾಗಿ ಹುಟ್ಟಿಕೊಂಡ ‘ಮಹಿಳಾ ಗೋಷ್ಠಿ’ಗಳೂ ಅಪ್ರಾಮುಖ್ಯತೆಯ ನಿಟ್ಟುಸಿರಾದವು. ಇಂದಿನ ಮಹಿಳಾ ಸಾಹಿತ್ಯ ಸಮ್ಮೇಳನಗಳು ಅಂಥ ಗೋಷ್ಠಿಗಳ ಇನ್ನೊಂದು ರೂಪವಷ್ಟೇ. ಆದರೂ ಮಹಿಳಾ ಸಾಹಿತ್ಯದ ವಿಶಿಷ್ಟತೆಯ ಬಗೆಗಿನ ಪ್ರಶ್ನೆಗಳು ಉದ್ಭವವಾಗಲು ಈ ಮಹಿಳಾ ಸಮ್ಮೇಳನಗಳು ಸಂದರ್ಭವನ್ನು ಒದಗಿಸಿವೆ. ಮಹಿಳಾ ಸಾಹಿತ್ಯದ ‘ಪ್ರತ್ಯೇಕತೆ’ಯ ನೆಲೆಯನ್ನು ಸ್ತ್ರೀ ಪರ ನಿಲುವಿನಿಂದ ಅರ್ಥೈಸಿದಾಗ ಮಾತ್ರ ಮಹಿಳಾ ಸಾಹಿತ್ಯ ಸಮ್ಮೇಳನಗಳು ಹೆಚ್ಚು ಅರ್ಥಪೂರ್ಣವಾಗಲು ಸಾಧ್ಯ ಎನ್ನುತ್ತಾರೆ ಲೇಖಕಿ. ಅಲ್ಲದೆ, “ಮಹಿಳಾ ಸಾಹಿತ್ಯ ಮತ್ತು ಸಾಹಿತ್ಯವನ್ನು ನೋಡುವ ಮಹಿಳಾ ದೃಷ್ಟಿ–ಇವು ಮಹಿಳಾ ಸಾಹಿತ್ಯ ಸಮ್ಮೇಳನಗಳೆಂಬ ಪ್ರತ್ಯೇಕ ಸಮ್ಮೇಳನಗಳ ಇರವಿಗೆ ಅರ್ಥ ತುಂಬಬೇಕಾಗಿದೆ” (ಪು. 106) ಎಂದು ಅಭಿಪ್ರಾಯ ಪಟ್ಟಿದ್ದಾರೆ.

○ ಸೀಮಂತಿನಿ ನಿರಂಜನ

ಮಹಿಳಾ ಸಂವೇದನೆ ಎಂಬುದು ಮಹಿಳಾ ಸಾಹಿತ್ಯದ ಪ್ರಮುಖ ಸೆಲೆಯಾದ್ದರಿಂದ, ಅದರ ವಿಶಿಷ್ಟ ಅಂಶಗಳನ್ನು ಕಾಣಿಸುವುದು ಅಗತ್ಯ. ಮಹಿಳಾ ಸಂವೇದನೆಯ ಸ್ವರೂಪ ಇಂದು ಬಹಳಷ್ಟು ಚರ್ಚೆಗೆ ಒಳಗಾಗಿದ್ದರೂ ಅದನ್ನು ಉಚಿತವಾಗಿ ಬೇರ್ಪಡಿಸಲು ಸಾಧ್ಯವಾಗಿಲ್ಲ. ಬದುಕನ್ನು ಗ್ರಹಿಸುವ, ಸ್ಪಂದಿಸುವ ಮಹಿಳೆಯ ದೃಷ್ಟಿ ‘ಭಿನ್ನ’ ಎಂದಷ್ಟೇ ಗುರುತಿಸಲಾಗಿದೆ. ಆದರೆ ಆ ಭಿನ್ನತೆಯು ಆಕಾರ ಮತ್ತು ಬಣ್ಣವನ್ನು ಇನ್ನೂ ಪಡೆದಿಲ್ಲ. ಮಹಿಳಾ ಸಾಹಿತಿಗಳು ತಮ್ಮ ಒರವಣಿಗೆಯಲ್ಲಿ ಎದುರಿಸುತ್ತಿರುವ ಮುಖ್ಯ ತೊಂದರೆಗಳನ್ನೂ ಮೇಲೆ ಉದ್ಧರಿಸಿದ ಲೇಖನ ಪ್ರಸ್ತಾಪಿಸುತ್ತದೆ. ಮೊದಲನೆಯದಾಗಿ, ಎಷ್ಟೋ ವರ್ಷಗಳಿಂದ ಸುಪ್ತವಾಗಿದ್ದ ಮಹಿಳೆಯರ ಅಭಿವ್ಯಕ್ತಿ ವಿಕಸನ

...ವರು ಭಾಷೆ ಬಳಸುವ ರೀತಿಯಲ್ಲಿ, ...ಣೆಗಳಲ್ಲಿ ಸಾಕಷ್ಟು ಪ್ರೌಢಿಮೆ ಗಳಿಸಿಲ್ಲ. ...ಾಗಿ, 'ಗಂಡಸಿನ ಪ್ರಪಂಚ'ವನ್ನು ತಾನು .../ಅನುಭವಿಸಲು ಸಾಮಾಜಿಕ ಅಡಚಣೆಗಳಿರು...ಂದ, ಆ ಲೋಕವನ್ನು ಮಹಿಳಾ ಸಾಹಿತಿ ಸಮರ್ಥಕವಾಗಿ ಚಿತ್ರಿಸಲಾರಳು. ಮಹಿಳಾ ಸಾಹಿತ್ಯದ 'ಮೌಲಿಕತೆ'ಯ ಪ್ರಶ್ನೆಯನ್ನೂ ಇಲ್ಲಿ ಎತ್ತಲಾಗಿದೆ. ಯಾವ ಸಾಮಾಜಿಕ ಮೌಲ್ಯಗಳು ಮಹಿಳಾ ಸಾಹಿತ್ಯವನ್ನು ರೂಪಿಸಿ, ಆ ಬರವಣಿಗೆಯಲ್ಲಿ ಬಿಂಬಿತವಾಗುತ್ತಿವೆ? ಪ್ರಚಲಿತ ಮೌಲ್ಯಗಳ ಊಿಯಲ್ಲಿ ತಯಾರಾದ, ತನ್ನದಲ್ಲದ "ಸಿದ್ಧ ಮಾದರಿಗಳ ಪ್ರಭಾವದಿಂದ ಮುಕ್ತವಾಗಿ ಮಹಿಳೆಯ ತುಡಿತದಿಂದಲೇ ಅವಳ ಸಾಹಿತ್ಯ" (ಪು. 111) ಸೃಷ್ಟಿಯಾಗಬೇಕು.

"ಮಹಿಳೆಯ ದೇಹ ಮತ್ತು ಮನಸ್ಸನ್ನು ಪುರುಷಾಧೀನವಾಗಿಸಿದ, ಅವರ ದುಡಿಮೆ ಮತ್ತು ತಾಯ್ತನದ ಹಕ್ಕನ್ನು ತನ್ನ ಹತೋಟಿಯಲ್ಲಿಟ್ಟುಕೊಂಡ ವ್ಯವಸ್ಥೆ" (ಪು. 1) ಅವಳ ಪ್ರತಿಭಟನೆಯ ದನಿಯನ್ನು ದಮನ ಮಾಡುತ್ತಲೇ ಬಂದಿದೆ. ಇಂಥ ಪರಿಸ್ಥಿತಿಯಲ್ಲಿ "ಬಂಡಾಯ ಒಂದು ಮೌಲ್ಯವಾಗಿ ಒಳಗಿಳಿದು ಬದುಕಿನೊಳಗಿಂದ ಸಾಹಿತ್ಯವಾಗಿ" (ಪು. 17 – 18) ರೂಪುಗೊಳ್ಳುವ ದಾರಿ ನಿಡಿದಾದದ್ದು. ಮಹಿಳಾ ಸಾಹಿತ್ಯದಲ್ಲಿ ಪ್ರತಿಭಟನೆ ಇತ್ತೀಚಿಗೆ ಕಂಡುಬರುತ್ತಿರುವ ಅಂಶ ಎನ್ನುವ ಮಾತನ್ನು ನಾವು ಚರಿತ್ರೆಯ ಹಿನ್ನೆಲೆಯಲ್ಲಿ ಸಂಧಿಸಿದಾಗ, 'ಪ್ರತಿಭಟನೆ' ಎನ್ನುವುದು ಕಾಲ ಮತ್ತು ಸಂದರ್ಭಕ್ಕೆ ಅನುಗುಣವಾಗಿ ಬದಲಾಗುತ್ತ ಬಂದಿದೆ ಎಂಬುದು ಅರಿವಾಗುತ್ತದೆ. ಪ್ರತಿಭಟನೆಯ ತುಡಿತ ಹಿಂದಿನ ಲೇಖಕಿಯರಲ್ಲಿ ಇರಲಿಲ್ಲ ಎನ್ನುವುದಕ್ಕಿಂತ, "(ಅ)ವರ ಪ್ರತಿಭಟನೆಯ ಸಂಗತಿ, ಕಾರಣ, ಸ್ವರೂಪವು ಭಿನ್ನವಾಗಿರುವುದು ಸಹಜ" (ಪು. 2) ಎಂದು ವಿಜಯಾ ಅವರು ಸ್ಥಾಪಿಸುತ್ತಾರೆ. ಮಹಿಳಾ ಸಾಹಿತ್ಯದಲ್ಲಿನ ಪ್ರತಿಭಟನೆಯ ದನಿಗಳನ್ನು ದಾಖಲಿಸಲು ಅವರು ವಚನಪೂರ್ವಯುಗ, ವಚನಯುಗ ಮತ್ತು ಹೊಸಗನ್ನಡ ಲೇಖಕಿಯರ ಸಾಹಿತ್ಯವನ್ನು ಸ್ಥೂಲವಾಗಿ ಪ್ರಸ್ತಾಪಿಸಿದ್ದಾರೆ. ಮಹಿಳಾ ಸಾಹಿತ್ಯದಲ್ಲಿ, ಸುಧಾರಣವಾದಿ ನೆಲೆಯಿಂದ ಹಿಡಿದು, ಸ್ಥಾಪಿತ ಮೌಲ್ಯಗಳ ಖಂಡನೆ ಮತ್ತು 'ವೈಯಕ್ತಿಕತೆಯ ಸ್ಥಾಪನೆಯ ಯತ್ನ'ದ ವರೆಗೆ, ಯಾವ "ಪ್ರತಿಭಟನೆಯ ಮಾದರಿಗಳೂ ಅಮುದ್ರಾಗಿಲ್ಲ. ಯಾತನೆ, ಸಂಘರ್ಷದಲ್ಲೇ ಹುಟ್ಟುತ್ತವೆ" (ಪು 18) ಎಂದು ತೋರಿಸಿದ್ದಾರೆ.

★ ★ ★

ಮಹಿಳಾ ಬರಹದ ಪರಂಪರೆಯನ್ನು ಗುರುತಿಸುವುದು, ನಿರ್ಮಿಸುವುದು, ವಿಜಯಾ ಅವರು ಕೈಗೊಂಡಿರುವ ಮತ್ತೊಂದು ಮುಖ್ಯವಾದ ಕೆಲಸ. ಈ ಪರಂಪರೆಯಲ್ಲಿ ನಾವು ವಿವಿಧ ಹಂತಗಳನ್ನು ಗುರುತಿಸುವುದು ಸಾಧ್ಯವಾದರೂ ಅವುಗಳ ಹಿಂದಿರುವ ಅಚಲವಾದ ಸ್ತ್ರೀಪರ ನಿಲುವನ್ನು ಬದಿಗೊತ್ತಲು ಸಾಧ್ಯವಿಲ್ಲ. ಸಂಕಲಿತ ಲೇಖನಗಳಲ್ಲಿ ಕೆಲವನ್ನು ಎರಡು ಗುಂಪುಗಳಾಗಿ ವಿಭಾಗಿಸಬಹುದು: ಸುಧಾರಣೆಯ ಅಲೆ ಒಂದಾದರೆ, ಉದಾರವಾದಿ ದೃಷ್ಟಿಕೋನ ಹೊತ್ತ ಸಾಹಿತ್ಯ ಮತ್ತೊಂದೆಡೆ.

ಈ ಶತಮಾನದ ಆರಂಭದಲ್ಲಿ ಬರವಣಿಗೆ ಪ್ರಾರಂಭಿಸಿದ ಲೇಖಕಿ (ಅವರು ಸಂಪಾದಕಿ, ಪ್ರಕಾಶಕಿ ಕೂಡ ಆಗಿದ್ದರು) ನಂಜನಗೂಡು ತಿರುಮಲಾಂಬ ಅವರ ಕೊಡುಗೆ ಇಂದು ಚಾರಿತ್ರಿಕ ಮಹತ್ವವನ್ನೊಳಗೊಂಡಿದೆ. ಅಂದಿನ ಸುಧಾರಣಾವಾದಿಗಳ ಆಲೋಚನೆಗಳನ್ನು ಪ್ರತಿನಿಧಿಸುವ ಅವರ ಬರಹದ ವಸ್ತು ವಿಧವಾ ಸಮಸ್ಯೆ, ಬಾಲ್ಯವಿವಾಹ ಮುಂತಾದ ಸಾಮಾಜಿಕ ಸಮಸ್ಯೆಗಳಾಗಿದ್ದವು. ಆ ಸಮಸ್ಯೆಗಳ ವಿಶ್ಲೇಷಣೆ ಇಂದು ನಮಗೆ ಸಾಂಪ್ರದಾಯಿಕವಾಗಿ ತೋರಬಹುದು. ಆದರೆ, ವಿಜಯಾ ಅವರು ಹೇಳುವಂತೆ, ಅಂಥ ಸಮಸ್ಯೆಗಳನ್ನು "ಅವರು ಗುರುತಿಸಿದ್ದು ಹಾಗೂ ಸ್ತ್ರೀ ಸತ್ತ್ವದ ಪರವಾಗಿ ದನಿಯೆತ್ತಿದ್ದು ಐತಿಹಾಸಿಕವಾಗಿ ಬಹಳ ಮುಖ್ಯವಾದ ಸಂಗತಿ" (ಪು. 38). ಸ್ತ್ರೀ ಶಿಕ್ಷಣದ ಆಗತ್ಯವನ್ನು ಅವರು ಒತ್ತಿ ಹೇಳಿದರೂ, ಅದರ ಸ್ವರೂಪದ ಚಿಂತನೆ ಅಂದಿನ ಸುಧಾರಣಾವಾದಿಗಳದಕ್ಕಿಂತ ಭಿನ್ನವಾಗಿರಲಿಲ್ಲ. "ಸದ್ಗೃಹಿಣಿತ್ವಕ್ಕಾಗಿ ಅಕ್ಷರಜ್ಞಾನ, ಮಾತೃತ್ವಕ್ಕಾಗಿಯೇ ಅವಳ ಮಾನಸಿಕ ಬೆಳವಣಿಗೆಯ ಆಗತ್ಯವಿದೆಯೆಂದು ಪ್ರತಿಪಾದಿಸಲಾಯಿತು." (ಪು 41)

ಪತ್ರಕರ್ತೆಯಾಗಿ ಸರಸ್ವತಿಬಾಯಿ ರಾಜವಾಡೆ ಅವರು ಮಹಿಳೆಯರಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಪ್ರಸ್ತಾಪಿಸಿದರು. ಅವರು ಪ್ರಾರಂಭಿಸಿದ 'ಸುಪ್ರಭಾತ' ಪತ್ರಿಕೆಯು ಮಹಿಳಾ ಸಾಹಿತ್ಯಕ್ಕೆ ಉತ್ತೇಜನ ನೀಡಲೆಂದೇ ಆರಂಭವಾಯಿತು. "ಕೇವಲ ಪುರುಷರಚಿತ ಸಾಹಿತ್ಯದಿಂದ

ಸಮಾಜದ ಆತ್ಮದರ್ಶನವಾಗಲಾರದು, ಸ್ತ್ರೀಯರೂ ಈ ಕ್ಷೇತ್ರದಲ್ಲಿ ಪರಿಶ್ರಮಿಸಬೇಕು. ಆದರೆ ಅವರ ಉತ್ಸಾಹ, ಪರಿಶ್ರಮಕ್ಕೆ ತಕ್ಕ ಪ್ರೋತ್ಸಾಹವಿಲ್ಲ, ಪ್ರಕಟಿಸುವವರಿಲ್ಲ" (ಪು. 95) ಎಂಬ ಅರಿವು 'ಸುಪ್ರಭಾತ'ದ ಹಿಂದಿನ ಗ್ರಹಿಕೆಯಾಗಿತ್ತು. ಅವರ 'ಸ್ತ್ರೀಪರ' ನಿಲುವಿನ ಮಿತಿಗಳೇನೇ ಇದ್ದರೂ, ಅವರ ಸಂಪಾದಕೀಯಗಳು, ಲೇಖನಗಳು ಮತ್ತು ಇತರ ಬರಹಗಳ ಮೂಲಕ, ಮಹಿಳೆಯರ ಪ್ರಗತಿಯ ಬಗೆಗಿನ ಅವರ ಕಾಳಜಿ ಹಾಗು ಚಿಂತನೆ ಸ್ಪಷ್ಟವಾಗಿ ಮೂಡಿಬಂದಿದೆ.

ಮುಂದಿನ ತಲೆಮಾರಿನ ಲೇಖಕಿಯರೊಡನೆ, ವಿಶಿಷ್ಟ ಸ್ತ್ರೀ ದೃಷ್ಟಿಕೋನವನ್ನು ಸಾಹಿತ್ಯದಲ್ಲಿ ಪ್ರತಿನಿಧಿಸುವ ಪ್ರಯತ್ನವೂ ಕಾಲಿಟ್ಟಿತು. ಸ್ತ್ರೀತ್ವದ ಈ ಎಚ್ಚರವನ್ನು ಉದಾರವಾದಿ ನೆಲೆಯಿಂದ ವಿಶ್ಲೇಷಿಸಲಾಯಿತು ಎನ್ನುವುದು ಗಮನಾರ್ಹ. ತ್ರಿವೇಣಿಯವರ ಬರಹ ಇಂಥ ಚಿಂತನೆಯನ್ನು ಪ್ರತಿಬಿಂಬಿಸುತ್ತದೆ. "ಸ್ಪಷ್ಟ ಸ್ತ್ರೀಪರ ದನಿ, ಧ್ವಿಸ್ತರನ್ಯಾಯ ವಿರೋಧ, ಮನೋ ವಿಶ್ಲೇಷಣಾ ಸಿದ್ಧಾಂತದ ಹಿನ್ನೆಲೆಯಲ್ಲಿ ಮೂಡಿಬಂದ ಉದಾರವಾದಿ ನೆಲೆ, ಮಹಿಳೆಗೆ ವಿದ್ಯೆಯ ಅಗತ್ಯದ ಪ್ರತಿಪಾದನೆ.... ಮಹಿಳೆಯರ ವಿಶಿಷ್ಟ ಜೀವನ ಸಂದರ್ಭ ಮತ್ತು ಅನುಭವಗಳನ್ನು ಪ್ರತಿಬಿಂಬಿಸುವಿಕೆ" (ಪು. 48) ಇವುಗಳಿಂದ ತ್ರಿವೇಣಿ ಅವರ ಸಾಹಿತ್ಯ ಮುಖ್ಯವಾಗುತ್ತದೆ ಎನ್ನುವ ವಿಜಯಾ ಅವರು, ಮಹಿಳಾ ಸಾಹಿತ್ಯದ ಪರಂಪರೆಯನ್ನು ನಿರ್ಮಿಸುವಾಗ ಚಾರಿತ್ರಿಕ ಮಹತ್ವದ ಜತೆಗೆ ಆ ಬರಹದ ಪ್ರಸ್ತುತತೆಯನ್ನು ಗಮನಿಸಬೇಕೆಂದು ಸೂಚಿಸುತ್ತಾರೆ.

ಈ ಚರ್ಚೆಯ ಸಂದರ್ಭದಲ್ಲಿ 'ಹೊನ್ನಮ್ಮನ ಕಿವಿಮಾತಿಗೆ ಒಂದು ಪ್ರತಿಕ್ರಿಯೆ' ಕೂಡ ಮುಖ್ಯವಾಗಿದೆ. ಹೆಸರಾಂತ ಬರಹಗಾರ್ತಿಯಾಗಿದ್ದರೂ ಹೊನ್ನಮ್ಮ ಪ್ರತಿಪಾದಿಸುವ ಮೌಲ್ಯಗಳು (ಉದಾಹರಣೆಗೆ, ಪುರುಷ-ಸ್ತ್ರೀಯರ ನಡುವಣ ಸಂಬಂಧವನ್ನು ಒಡೆಯ ಮತ್ತು ತೊತ್ತಿನ ಸಂಬಂಧವಾಗಿಸುವುದು) ಮತ್ತು ಆ ಕಾಲದ ಸಮಾಜ ಸ್ಥಾಪಿಸಿದ ಮೌಲ್ಯಗಳು ಇಂದು ನಮಗೆ ಅರ್ಥಹೀನವಾದವು ಎನ್ನುತ್ತಾರೆ ಲೇಖಕಿ.

★ ★ ★

ಸಂಕಲನದ ಇನ್ನೂ ಕೆಲವು ಲೇಖನಗಳು ಕನ್ನಡ ಸಾಹಿತ್ಯವನ್ನು ಸ್ತ್ರೀಪರ ನೋಟದಿಂದ ಕಾಣುವ ಯತ್ನ ಎಂದು ಹೇಳಬಹುದು. ಕಾರಂತರ ಕಾದಂಬರಿಗಳಲ್ಲಿ ನಮ್ಮನ್ನು ಎದುರಾಗುವ ಗ್ರಾಮೀಣ ಮಹಿಳೆಯರು, ಅವರ ಬದುಕಿನ ಸ್ವರೂಪ-ಮೌಲ್ಯಗಳನ್ನು ಶೋಧಿಸಲಾಗಿದೆ. ಜಾತಿ ಮತ್ತು ವರ್ಗಾಧಾರಿತ ಅಸಮಾನತೆಗಳ ಜತೆಯಲ್ಲಿ ಹೆಣೆದುಕೊಂಡಿರುವ ಲಿಂಗಾಧಾರಿತ ಅಸಮಾನತೆಯ ನೆಲೆಯನ್ನು ವಿಶ್ಲೇಷಿಸುವಲ್ಲಿ, ನಿರಂಜನರ ಕೃತಿಗಳಲ್ಲಿ ಕಾಣುವ 'ಪ್ರಗತಿಪರ' ಧೋರಣೆಯನ್ನು ಪ್ರಸ್ತಾಪಿಸಲಾಗಿದೆ. ಹಾಗೆಯೇ, ಚದುರಂಗರ 'ವೈಶಾಖ'ದ ಜಾತಿ ಮತ್ತು ವರ್ಗಗಳಲ್ಲಿ ಮಹಿಳೆಯ ಬದುಕು ಮೂಡಿ ಬಂದಿರುವುದನ್ನೂ ವಿಜಯಾ ಅವರು ಕೊಟ್ಟಿನೋಡಿದ್ದಾರೆ.

★ ★ ★

ಸಾಮಾಜಿಕ ಚಿಂತನೆಯ ತಲೆ ಬರಹದಡಿಯಲ್ಲಿ ಕೆಲವು ಮುಖ್ಯ ಲೇಖನಗಳನ್ನು ಪರಿಶೀಲಿಸಬಹುದು. ಸಮಾಜದಲ್ಲಿನ ಲಿಂಗಾಧಾರಿತ ಅಸಮಾನತೆಗಳನ್ನು ತೊಡೆದು ಹಾಕಿ, 'ಗಂಡಸಿಗಿಂತ ಹೆಂಗಸು ಕೀಳು' ಎಂಬ ಮನೋಭಾವವನ್ನು ಬೇರು ಸಮೇತ ಕಿತ್ತೊಗೆಯುವುದು ಮಹಿಳಾ ಚಳವಳಿಯ ಗುರಿ. ಮೌಲ್ಯಗಳಲ್ಲಿ ಮತ್ತು ವಿಚಾರಗಳ ನೆಲೆಯಲ್ಲಿ ಬದಲಾವಣೆ ತರುವುದರಲ್ಲಿ ಶಿಕ್ಷಣ ಮುಖ್ಯ ಪಾತ್ರವಹಿಸುತ್ತದೆ. ಆದ್ದರಿಂದಲೇ ಮಹಿಳಾ ಆಂದೋಲನವು ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣದತ್ತ ಗಮನ ಹರಿಸಬೇಕು ಎನ್ನುವುದು ಲೇಖಕಿಯ ಸೂಚನೆ. ಪದ್ಯಗಳಲ್ಲಿ, ಬೋಧಿಸುವ ಕ್ರಮದಲ್ಲಿ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ "ಲಿಂಗಾಧಾರಿತ ಶ್ರೇಣಿಗಳುಳ್ಳ ಸಮಾಜದ ಧೋರಣೆಗಳು.... ಮುಂದುವರಿಯುವುದು ನಿಲ್ಲಬೇಕಾಗಿದೆ" (ಪು. 114).

ಮಹಿಳೆಯರಿಗೆ ಸಂಬಂಧಿಸಿದ್ದ ಸಾಮಾಜಿಕ ಮೌಲ್ಯಗಳು ಯಾವ ಬುನಾದಿಯ ಮೇಲೆ ನಿಂತಿವೆ ? ಅವುಗಳಲ್ಲಿ ಬದಲಾವಣೆ ತರಲು ಪ್ರಯತ್ನಗಳು ವೈಯಕ್ತಿಕ ನೆಲೆಯಲ್ಲಿ ಆರಂಭವಾಗಬೇಕೋ ಅಥವಾ ಸಾಮಾಜಿಕ ಸ್ತರದಲ್ಲೋ? ಈ ಬದಲಾವಣೆಯಲ್ಲಿ ಮಹಿಳೆಯರ ಪಾತ್ರ ಏನಾಗಿದೆ/ಆಗಬೇಕು ? ಮುಂತಾದ ಪ್ರಶ್ನೆಗಳನ್ನೂ ಎತ್ತಿದ್ದಾರೆ.

ಹೆಣ್ಣನ್ನು ಜಾಹಿರಾತುಗಳು ಬಳಸಿಕೊಳ್ಳುವ ರೀತಿಯ ಮತ್ತು ಅದರ ಬಗ್ಗೆ ವ್ಯಕ್ತವಾಗಿರುವ ವಿರೋಧಗಳ ಹಿನ್ನೆಲೆಯಲ್ಲಿ ಕೆಲವು ಅಂಶಗಳನ್ನು ಲೇಖಕಿ ಗುರುತಿಸಿದ್ದಾರೆ. ಹೆಣ್ಣಿನ ದೈಹಿಕ ಆಕರ್ಷಣೆಯನ್ನು ಮಾತ್ರ ಒತ್ತಿ

ಹೇಳುವುದರಿಂದ ಅವಳ 'ಸಮಗ್ರ ವ್ಯಕ್ತಿತ್ವ'ವನ್ನು ಅಲ್ಲಗೆಳೆಯುತ್ತದೆ ಎನ್ನುವುದು ಈ ವಿರೋಧದ ಮೂಲ. ಸಮಾಜದಲ್ಲಿನ ಅವಳ ಪಾತ್ರದ ಬಗೆಗೆ ಅದು ಪೋಷಿಸುವ ಆರಚನಾತ್ಮಕ ಧೋರಣೆಯನ್ನೂ ವಿರೋಧಿಸಲಾಗಿದೆ. ಆದರೆ, ಜಾಹಿರಾತುಗಳ ಹಿಂದಿನ ವಸ್ತುಸ್ಥಿತಿ ಬದಲಾಗದೆ, ಅವು ಹೆಣ್ಣನ್ನು ಬಳಸಿಕೊಳ್ಳುವ ರೀತಿ ಬದಲಾಗದು.

ನಮ್ಮ ಸಮಾಜದಲ್ಲಿ ಹೆಣ್ಣಿನ ಮೇಲಾಗುವ ದಬ್ಬಾಳಿಕೆ ಕೇವಲ ನೈತಿಕ ವಸ್ತುಸ್ಥಿತಿಗೆ ಸಂಬಂಧಿಸಿದ್ದಲ್ಲ. ಅದಕ್ಕೆ ಸಾಮಾಜಿಕ, ಐತಿಹಾಸಿಕ ಕಾರಣಗಳಿವೆ. ಉತ್ಪಾದನಾ ಕ್ಷೇತ್ರದಲ್ಲಿ ಅವಳು ನಿರ್ವಹಿಸುವ / ನಿರ್ವಹಿಸದಿರುವ ಕಾರ್ಯಗಳು ಅವಳನ್ನು ಕೀಳು ಸ್ಥಾನಕ್ಕೆ ತಳ್ಳಿದೆ. ವರದಕ್ಷಿಣೆಯಂಥ ಸಮಸ್ಯೆಯು ಬೇರನ್ನು ಇಲ್ಲೇ ಹುಡುಕಬಹುದು. ಇದನ್ನು ಕಂಡುಕೊಂಡ ಗಾಂಧೀಜಿ "ಆರ್ಥಿಕ ಅವಲಂಬನೆ, ತತ್ಪರಿಣಾಮವಾದ ದಾಸ್ಯ ಮನೋಭಾವವನ್ನು ನಿರ್ಮೂಲ ಮಾಡಲು ಕರೆಯಿತ್ತಿದ್ದಾರೆ" (ಪು.120). ವರದಕ್ಷಿಣೆಯ ಸಮಸ್ಯೆಯ ಬಗೆಗೆ ಗಾಂಧೀಜಿ ಆಡಿದ ಮಾತು ಇಂದಿಗೂ ಅನ್ವಯವಾಗುತ್ತದೆ ಎಂದು ಲೇಖಕಿ ತೋರಿಸಿಕೊಟ್ಟಿದ್ದಾರೆ.

★ ★ ★

ಸಾಹಿತ್ಯವನ್ನಾಗಲಿ, ಚರಿತ್ರೆಯನ್ನಾಗಲಿ, ಸಾಮಾಜಿಕ ರಚನೆಯನ್ನಾಗಲಿ ಹೊಸ ದೃಷ್ಟಿಕೋನದಿಂದ ವೀಕ್ಷಿಸಿದಾಗ ಅವುಗಳ ಸ್ವರೂಪವೇ ಬದಲಾಗುತ್ತದೆ. ಸ್ತ್ರೀ ಪರ ದೃಷ್ಟಿಕೋನ ಇಂಥದೊಂದು ವಿಮರ್ಶಾತ್ಮಕ ನೆಲೆ. 'ಅಕ್ಕನ ಸಂಪಾದನೆ'ಗಳನ್ನು ಪರಿಶೀಲಿಸುತ್ತ ವಿಜಯಾ ಅವರು ಹೀಗೆ ಬರೆದಿದ್ದಾರೆ :

"ಶೂನ್ಯಸಂಪಾದನೆಗಳಲ್ಲಿನ 'ಅಕ್ಕನ ಸಂಪಾದನೆ'ಗಳು ಅಕ್ಕನ ಜೀವನದ ಹಿನ್ನೆಲೆ, ಅನುಭಾವಿಕತೆಯನ್ನು ಅನಂತರದ ಶತಮಾನಗಳು ಗ್ರಹಿಸಿದ, ಅರ್ಥೈಸಿದ ಕೆಲವು ರೀತಿಗಳನ್ನು ಕಾಣಿಸುತ್ತವೆ. ಆಯಾ ಸಂಪಾದನಕಾರರ ಸಂದರ್ಭ, ದೃಷ್ಟಿಕೋನ, ಶಕ್ತಿ, ಆಸಕ್ತಿಗಳಿಗನುಗುಣವಾಗಿ ಈ ಪ್ರಸಂಗದಲ್ಲಿ ಲೋಪ, ಪ್ರಕ್ಷೇಪ, ವ್ಯತ್ಯಾಸಗಳು ಆಗಿವೆ" (ಪು. 93).

ಒಬ್ಬ ವ್ಯಕ್ತಿ ಮತ್ತು ಅವಳ ಸಾಹಿತ್ಯದ ಬಗ್ಗೆ ಮೂಡುವ ಇಂಥ ವಿಭಿನ್ನ ಪ್ರತಿಪಾದನೆಗಳು ಧ್ವನಿಸುವ ಅನೇಕ ಪ್ರಶ್ನೆಗಳನ್ನು ವಿಮರ್ಶಿಸುವುದು ಅತ್ಯಗತ್ಯ. ಹಾಗೆ ಮಾಡಿದಾಗ ಹೆಣ್ಣು ಮತ್ತು ಹೆಣ್ಣುತನದ ಬಗ್ಗೆ ಸಾಹಿತ್ಯ ಸಮಾಜಗಳಲ್ಲಿ ಪ್ರಚಲಿತವಾಗಿರುವ ವಿಚಾರಗಳು ಸ್ಪಷ್ಟವಾಗುತ್ತವೆ. ಸಾಹಿತ್ಯಕ ಮತ್ತು ಸಾಮಾಜಿಕ ಸಂದರ್ಭಗಳಲ್ಲಿ ನಡೆದ/ನಡೆದಿರುವ ಸಂವಾದಗಳನ್ನು ಸ್ತ್ರೀಪರ ನಿಲುವಿನಿಂದ ಪರಿಶೀಲಿಸಿದಾಗ, ಮಹಿಳೆಯ 'ಸಂವೇದನೆ', 'ಆಧ್ಯಾತ್ಮಿಕತೆ', 'ಲೈಂಗಿಕತೆ', 'ಮಾತೃತ್ವ' ಇತ್ಯಾದಿಗಳ ಬಗೆಗಿನ ಅನೇಕ ಎಳೆಗಳು ಗೋಚರವಾಗುತ್ತವೆ. ಇಂಥ ಪ್ರಸಂಗಗಳನ್ನು (discourses) ವಿಶ್ಲೇಷಿಸಿ ವಿಜಯಾ ಅವರ ವಿಮರ್ಶಾಲೇಖನಗಳು ಈಗಾಗಲೇ ರೂಪಗೊಳ್ಳುತ್ತಿರುವ ಪರ್ಯಾಯ ಪ್ರಸಂಗಕ್ಕೆ ಗಮನಾರ್ಹ ಕೊಡುಗೆಯಾಗಿದೆ. ○

---



---

## ಇನ್ನೂ ಲೆಕ್ಕಕ್ಕೆ ಸಿಗದ ದುಡಿಮೆ

ಅಭಿವೃದ್ಧಿ ವಿಧಾನದಲ್ಲಿ ಮಹಿಳೆಯರ ಪಾತ್ರ ಮಹತ್ವದ್ದಾಗಿದೆ. ಅಲ್ಲದೆ, ಮಕ್ಕಳ ಪಾಲನೆ, ಪೋಷಣೆಯ ಗುರುತರ ಜವಾಬ್ದಾರಿ ಕೂಡ ಅವರ ಮೇಲೆ ಇದೆ. ಆದುದರಿಂದ ಆರ್ಥಿಕ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರ ಹಾಗೂ ಸಮಾಜದಲ್ಲಿನ ಅವರ ಸ್ಥಾನಮಾನವು ಮಕ್ಕಳಿಗೆ ಮತ್ತು ಒಟ್ಟಾರೆ ದೇಶದ ಅಭಿವೃದ್ಧಿಗೆ ಪ್ರಮುಖ ಅಂಶವಾಗುತ್ತದೆ.

ಮಹಿಳೆ ಮತ್ತು ಅಭಿವೃದ್ಧಿಯ ನಡುವಣ ಸಂಬಂಧವನ್ನು ನಿರ್ಧರಿಸುವ ಅಂಶಗಳನ್ನು ಗಮನಿಸಬೇಕಾದುದು ಅಗತ್ಯ. ಆರೋಗ್ಯ, ಪೌಷ್ಟಿಕಾಂಶ, ಶಿಕ್ಷಣ ಇಂಥ ವಿವಿಧ ಕ್ಷೇತ್ರಗಳಲ್ಲಿನ ಅಸಮತೋಲನ ಕಣ್ಣಿಗೆ ರಾಚುವಂತಿದೆ. ಇದು ದಾರಿದ್ರ್ಯದ ಕೊಡುಗೆ ಎಂಬ ಪಲಾಯನವಾದ ಮಾಡಿಬಿಡಬಹುದು. ಆದರೆ ದಾರಿದ್ರ್ಯದ ಪ್ರಮಾಣ ಕಡಿಮೆಯಾಯಿತೆಂದು ಭಾವಿಸೋಣ. ಆಗ ಅಸಮತೋಲನವೂ ಸರಿಹೋಗುವುದೆ? ಇಲ್ಲ ಎಂಬುದೇ ಇದಕ್ಕೆ ಉತ್ತರ. ಏಕೆಂದರೆ, ಮಹಿಳೆಯನ್ನೂ ನೋಡುವ ಸಾಮಾಜಿಕ ದೃಷ್ಟಿಕೋನ ಬದಲಾಗುವವರೆಗೆ ಅವರ ಪರಿಸ್ಥಿತಿ ಸುಧಾರಣೆ ಅಸಾಧ್ಯ.

### ಜನಸಂಖ್ಯೆ ಪ್ರಮಾಣ

ಮೊದಲು ಜನಸಂಖ್ಯೆ ಪ್ರಮಾಣ ಗಮನಿಸಿ ಭಾರತದಲ್ಲಿ ಪುರುಷರ ಸಂಖ್ಯೆಗೆ ಹೋಲಿಸಿದರೆ ಮಹಿಳೆಯರ ಸಂಖ್ಯೆ ವರ್ಷೇ ವರ್ಷೇ ಇಳಿಮುಖವಾಗುತ್ತಿದೆ. ವಿಶ್ವದ ಇತರ ಭಾಗಗಳಲ್ಲಿ ಮಹಿಳೆಯರ ಸಂಖ್ಯೆ ಏರುತ್ತಲೇ ಇದೆ ಎಂಬುದು ಗಮನಾರ್ಹ. ಭಾರತದಲ್ಲಿ 1901ರಲ್ಲಿ ಪ್ರತಿ ಸಾವಿರ ಪುರುಷರಿಗೆ 972 ಮಹಿಳೆಯರಿದ್ದರು. 1981ರಲ್ಲಿ ಅದು 935ಕ್ಕೆ ಇಳಿಯಿತು. ಕರ್ನಾಟಕದಲ್ಲಿ ಅದೇ ಅವಧಿಯಲ್ಲಿ ಮಹಿಳೆಯರ ಸಂಖ್ಯೆ 980 ಮತ್ತು 963.

ಜೀವನ ನಿರೀಕ್ಷೆ ಅಥವಾ ಜೀವಿಸುವ ಕಾಲ (life expentency) ವನ್ನು ಗಮನಿಸಿದರೆ ಮಹಿಳೆಯರು ಪುರುಷರಿಗಿಂತ ಹೆಚ್ಚು ಆಯಸ್ಸು ಉಳ್ಳವರಾಗಿದ್ದಾರೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸರಾಸರಿ ವಯೋಮಾನ ಅಂತರ 10 ವರ್ಷಗಳು. ಭಾರತದಲ್ಲಿ ಈ ಸ್ತ್ರೀ–ಪುರುಷರ ನಡುವಣ ಆಯಸ್ಸಿನ ಅಂತರ ವರ್ಷೇ ವರ್ಷೇ ಕಡಿಮೆಯಾಗುತ್ತಿದೆ. ಸರಾಸರಿ ಆಯಸ್ಸು 50 ವರ್ಷಗಳು. ಪುರುಷರ ಆಯಸ್ಸಿನ ಪ್ರಮಾಣ ಹೆಚ್ಚುತ್ತಿದೆ. ಅದೇ ಪ್ರಮಾಣದಲ್ಲಿ ಮಹಿಳೆಯರ ಆಯಸ್ಸು ಹೆಚ್ಚುತ್ತಿಲ್ಲ. ಆರೋಗ್ಯ ಸೇವಾ ಯೋಜನೆಗಳು ಆಯಸ್ಸಿನ ಅವಧಿಯನ್ನು ಹೆಚ್ಚಿಸುತ್ತವೆ. ಸ್ತ್ರೀ–ಪುರುಷರ ಸಾವಿನ ವಯಸ್ಸಿನಲ್ಲಿ ಪ್ರಮಾಣ ಒಂದೇಗತಿಯಲ್ಲಿ ಏಕೆ ಕಂಡುಬರದಿರುವುದಕ್ಕೆ ಆರೋಗ್ಯ ಯೋಜನೆಗಳು ಹೆಚ್ಚು ಮಹಿಳೆಯರನ್ನು ಮುಟ್ಟುತ್ತಿಲ್ಲ ಎಂಬುದೇ ಸ್ಪಷ್ಟ ಕಾರಣವಾಗಿದೆ.

ಆರೋಗ್ಯ ಸೇವಾ ಯೋಜನೆ ಪ್ರತಿಯೊಬ್ಬರನ್ನೂ ಮುಟ್ಟಬೇಕಾದುದು ಅಗತ್ಯ. ಗರ್ಭಿಣಿಯರು ಅಥವಾ ಶಿಶುಪಾಲನೆ ಮಾಡುವ ತಾಯಂದಿರನ್ನು ಬಿಟ್ಟರೆ ಉಳಿದ ಮಹಿಳೆಯರಿಗೆ ಆರೋಗ್ಯ ಸೇವಾ ಯೋಜನೆ ಸಿಗುತ್ತಿರುವುದು ಅತ್ಯಲ್ಪ. ಆಸ್ಪತ್ರೆಗಳಲ್ಲಿ ಕೂಡ ಮಹಿಳಾ ರೋಗಿಗಳಿಗೆ ಮೀಸಲಿಡುವ ವಾರ್ಡ್‌ಗಳ ಸಂಖ್ಯೆ ಕಡಿಮೆಯಾಗಿದೆ. ಸಾಮಾಜಿಕ ಅಡೆತಡೆಗಳ ಕಾರಣ ಮಹಿಳಾ ರೋಗಿಗಳು ಪುರುಷ ವೈದ್ಯರ ಬಳಿಹೋಗಲು ಹಿಂಜರಿಯುತ್ತಾರೆ. ಗ್ರಾಮಾಂತರ ಪ್ರದೇಶಗಳಲ್ಲಂತೂ ಮಹಿಳಾ ವೈದ್ಯರ ಸಂಖ್ಯೆ ತೀರಾ ಕಡಿಮೆ.

ಸೇವಾ ಸೌಲಭ್ಯಗಳ ವಿಚಾರದಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರು ಅಮುಖ್ಯರಾಗಿ ಬಿಡುತ್ತಾರೆ. ವೈದ್ಯಕೀಯ ಸಂಸ್ಥೆಗಳಲ್ಲಿನ ದಾಖಲೆ ಪ್ರಕಾರ, ಆರೋಗ್ಯ ಸೇವಾ ಸೌಲಭ್ಯ ಪಡೆದುಕೊಳ್ಳುವ ನಾಲ್ಕು ಮಂದಿಯಲ್ಲಿ ಮೂರು ಪುರುಷರಾಗಿರುತ್ತಾರೆ. ಹಾಗೆಂದು ಮಹಿಳಾ ರೋಗಿಗಳ ಸಂಖ್ಯೆ ಕಡಿಮೆ ಏನಿಲ್ಲ. ಪುರುಷ ರೋಗಿಗಳಗಿಂತ ಅವರ ಸಂಖ್ಯೆಯೇ ಹೆಚ್ಚು, ವಿಪರೀತಕ್ಕೆ

ಹೋದಾಗಲೇ ಮಹಿಳೆ ತನ್ನ ಕಾಯಿಲೆ ಬಗೆಗೆ ಮಾತನಾಡುತ್ತಾಳೆ ಎಂಬ ವಾದದಲ್ಲಿ ಸಂತ್ಯಾಂಶವಿದೆ. ಜತೆಗೆ, ಮಹಿಳೆಯರಿಗೆ ಅನುಕೂಲವಾದ ಸಮಯದಲ್ಲಿ ಚಿಕಿತ್ಸಾಲಯಗಳು ತೆರೆದಿರುವುದಿಲ್ಲ. ಉದಾಹರಣೆಗೆ, ಹೊಲದ ಕೆಲಸಕ್ಕೆ ಹೋಗುವ ಹೆಣ್ಣು ಯಾವಾಗ ವೈದ್ಯರ ಬಳಿ ಹೋಗುತ್ತಾಳೆ? ಅವಳಿಗೆ ದುಡಿಮೆ ಮುಖ್ಯವಾಗಿರುತ್ತದೆ. ಆರೋಗ್ಯ ತೀರಾ ಹದಗೆಟ್ಟು, ದುಡಿಮೆ ಕೂಡಾ ಅಸಾಧ್ಯವೆನಿಸಿದಾಗ ವೈದ್ಯರ ಬಳಿ ಹೋಗುತ್ತಾಳೆ. ಎಷ್ಟೋ ಬಾರಿ ಆ ವೇಳೆಗೆ ಆರೋಗ್ಯ ಸ್ಥಿತಿ ತೀರಾ ಕ್ಷೀಣವಾಗಿ ಹೋಗಿರುತ್ತದೆ.

### ಪೌಷ್ಟಿಕಾಂಶ

ಪೌಷ್ಟಿಕಾಂಶ ಎಲ್ಲರಿಗೂ ಬೇಕು. ಸ್ತ್ರೀ, ಪುರುಷ ಮತ್ತು ಮಕ್ಕಳಲ್ಲಿ ಅವರ ಕೊರತೆ ಇದೆ. ಆದರೆ ಮಹಿಳೆಯರಿಗೆ ಹೆಚ್ಚು ಪೌಷ್ಟಿಕಾಂಶ ದೊರೆಯುತ್ತಿಲ್ಲ ಎಂಬುದು ನಿಜ. ಕೃಷಿ ಕಾರ್ಮಿಕ ಮಹಿಳೆಯರು, ಕೊಳಗೇರಿ ಹಾಗೂ ಅಭಾವ ಪೀಡಿತ ಪ್ರದೇಶದ ಮಹಿಳೆಯರು ಈ ಗುಂಪಿಗೆ ಹೆಚ್ಚಾಗಿ ಸೇರಿದವರು. ಒಂದು ಅಂದಾಜಿನ ಪ್ರಕಾರ, ಸರಾಸರಿಯಂತೆ, ಒಬ್ಬ ಭಾರತೀಯ ಮಹಿಳೆ 8 ಬಾರಿ ಗರ್ಭಿಣಿಯಾಗುತ್ತಾಳೆ; 6 ರಿಂದ 7 ಮಕ್ಕಳಿಗೆ ಜನ್ಮ ನೀಡುತ್ತಾಳೆ. ಶಿಶು ಜನ್ಮ ನೀಡುವ ಸಾಮರ್ಥ್ಯವಿರುವ ಸುಮಾರು 30 ವರ್ಷಗಳ ಅವಧಿಯಲ್ಲಿ ಅವಳು 16 ವರ್ಷ ಗರ್ಭಿಣಿ ಮತ್ತು ಬಾಣಂತಿಯಾಗಿರುತ್ತಾಳೆ; ಪೌಷ್ಟಿಕಾಂಶ ಕೊರತೆಯ ಸುಮಾರು 1.40 ಕೋಟಿ ಮಹಿಳೆಯರ ಪ್ರತೀಕವಾಗಿರುತ್ತಾಳೆ.

ಮಹಿಳೆಯರಿಗೆ ಹೆಚ್ಚು ಪೌಷ್ಟಿಕಾಂಶ ಬೇಡ ಎಂಬ ವಾದಕ್ಕೆ ಅರ್ಥವೇ ಇಲ್ಲ. ಗ್ರಾಮಾಂತರ ಪ್ರದೇಶವನ್ನೇ ನೋಡಿ .... ದುಡಿಮೆ ಕೊಡುಗೆ ಪ್ರಮಾಣದ ಸಮೀಕ್ಷೆ ಗಮನಿಸಿದರೆ ಅದರಲ್ಲಿ ಪುರುಷರ ಪಾಲು ಶೇಕಡ 31 ಇದ್ದರೆ ಮಹಿಳೆಯರ ಪಾಲು ಶೇಕಡ 53 ಮತ್ತು ಮಕ್ಕಳದು ಶೇಕಡ 16. ಹಾಗಾದರೆ ಪೌಷ್ಟಿಕಾಂಶ ಯಾರಿಗೆ ಹೆಚ್ಚು ಅಗತ್ಯ ?

### ದ್ವಿಮುಖ ಪಾತ್ರ

ಮಹಿಳೆಯರು ತಮ್ಮ ಕುಟುಂಬದ ಆಹಾರ ಉತ್ಪಾದನೆ, ವಿಧಾನ ಹಾಗೂ ಹಂಚಿಕೆದಾರರಲ್ಲದೆ ಕುಟುಂಬದ ಮೂಲ ಅಗತ್ಯಗಳಿಗೆ ವಿನಿಯೋಗವಾಗುವ ನಗದು ಹಣ ತರುವವರಾಗಿಯೂ ಇದ್ದಾರೆ. ಹೀಗಾಗಿ ಆರ್ಥಿಕ ಉತ್ಪಾದಕತೆಯಲ್ಲಿ ಮಹಿಳೆಯರದು ದ್ವಿಮುಖ ಪಾತ್ರ–ಮನೆ ಮತ್ತು ಹೊಲದಲ್ಲಿ ವೇತನ ರಹಿತ ಕಾರ್ಮಿಕರು ಮತ್ತು ಮನೆ ಹೊರಗೆ ವೇತನ ಗಳಿಸುವ ಕಾರ್ಮಿಕರು. ಬಡ ಕುಟುಂಬಗಳಲ್ಲಿ ಕುಟುಂಬದ ಆದಾಯದ ಬಹುಭಾಗ ಆಹಾರಕ್ಕೇ ಖರ್ಚಾಗಿ ಹೋಗಿ ಬಿಡುತ್ತದೆ. ಮಹಿಳೆಯರು ತಾವು ಸಂಪಾದಿಸುವ ಬಹುಭಾಗವನ್ನು ಕುಟುಂಬಕ್ಕೇ ವಿನಿಯೋಗಿಸುತ್ತಾರೆ. ಕುಟುಂಬದ ಕೊಡುಗೆ ವಿಧಾನದಲ್ಲಿ ಅವರ ಪಾತ್ರ ಗಮನಾರ್ಹವಾಗಿದೆ. ಆದುದರಿಂದ ಈ ವಿಧಾನಗಳು ಒಟ್ಟಾರೆ ಆರೋಗ್ಯ ಮತ್ತು ಪೌಷ್ಟಿಕಾಂಶ ಪರಿಸ್ಥಿತಿಗೆ ಮುಖ್ಯವೆನಿಸುತ್ತದೆ. ಇದರ ಜತೆಗೆ, ಮನೆ–ಮಕ್ಕಳನ್ನು ನೋಡಿಕೊಳ್ಳುವ ಸಾಂಪ್ರದಾಯಿಕ ಹೊಣೆ ಮಹಿಳೆ ಮೇಲೆ ಹೆಚ್ಚಾಗಿರುವುದರಿಂದ, ಮನೆಯಲ್ಲಿನ ಸ್ಥಿತಿಗತಿಗಳು ಮಹಿಳೆಯ ಉತ್ಪಾದಕತಾ ಸಾಮರ್ಥ್ಯದ ಮೇಲೆ ನೇರ ಪರಿಣಾಮ ಬೀರುತ್ತದೆ.

### ಶೈಕ್ಷಣಿಕ ನಿರ್ಲಕ್ಷ್ಯ

ಉದ್ಯೋಗವು ಮಹಿಳೆಯ ಸ್ಥಾನಮಾನ ಸುಧಾರಣೆಗೆ ಪ್ರಮುಖವಾಗುತ್ತದೆ. ಅದು ಉತ್ಪಾದಕತೆ ಮೇಲೆ ನಿರ್ಣಾಯಕ ಪ್ರಭಾವ ಬೀರುವುದಲ್ಲದೆ, ಮನೆಯ ರೂಪುರೇಷೆ ಹಾಗೂ ಕುಟುಂಬದಲ್ಲಿನ ಸಂಬಂಧಗಳ ಮೇಲೂ ಗಮನಾರ್ಹ ಪರಿಣಾಮ ಉಂಟುಮಾಡುತ್ತದೆ. ಹಾಗೆಂದು ಶಿಕ್ಷಣವು ಅಮುಖ್ಯವೆಂದು ಹೇಳಲಾಗದು. ಶಿಕ್ಷಣವು ನಮ್ಮ ಆಶೋತ್ತರ, ತಂತ್ರಜ್ಞಾನ, ಉತ್ಪಾದಕತೆ ಸಾಮರ್ಥ್ಯ ಮತ್ತು ಸಾಮಾಜಿಕ ಸಂಚಾರದಂಥ ಪ್ರಮುಖ ಅಂಶಗಳನ್ನು ನಿರ್ಧರಿಸುತ್ತದೆ. ಮೌಲ್ಯಗಳ ಬದಲಾವಣೆಗೆ ಅದು ಪೂರಕ.

ಉದ್ಯೋಗ, ಆರೋಗ್ಯ, ಸಂವಿಧಾನದತ್ತ ಹಕ್ಕುಗಳ ಉಪಯೋಗ, ಸಮಾನತೆ, ಸಮಾನ ಅವಕಾಶ ಇವುಗಳು ಮಹಿಳೆಯರಿಗೆ ಲಭ್ಯವಾಗಲು ನಿರಕ್ಷರತೆ ಅಡ್ಡಿಯಾಗಿದೆ. ಮಹಿಳಾ ಸಾಕ್ಷರತೆ ಹಾಗೂ ಶಿಕ್ಷಣ ಮತ್ತು ಉದ್ಯೋಗವು, ಕುಟುಂಬದ ಗುಣಮಟ್ಟ ಸುಧಾರಣೆ, ಚಿಕ್ಕ ಕುಟುಂಬತತ್ವಕ್ಕೆ ಅಗತ್ಯವಾಗಿವೆ. ಕುಟುಂಬ ಸಂಖ್ಯೆ ನಿಯಂತ್ರಣದಲ್ಲಿ ಮಹಿಳೆಯರ ಪಾತ್ರ ಸಮರ್ಥವಾಗಲು ಅವರಿಗೆ ಶಿಕ್ಷಣ ಅಗತ್ಯ.

ಮಹಿಳಾ ಶಿಕ್ಷಣದ ವಿಚಾರದಲ್ಲಿ ಸಾಮಾಜಿಕ ಧೋರಣೆ ಇನ್ನೂ ನಕಾರಾತ್ಮಕವಾಗೇ ಇದೆ. 1971ರಲ್ಲಿ ಭಾರತೀಯ ಮಹಿಳೆಯರ ಸ್ಥಾನಮಾನ ಕುರಿತಂತೆ ಸಮಿತಿಯೊಂದು ನಡೆಸಿದ ಸಮೀಕ್ಷೆ ಪ್ರಕಾರ, ಮಹಿಳೆಯರಿಗೆ ಶಿಕ್ಷಣದ ಅವಶ್ಯವೇ ಇಲ್ಲ ಎಂದು ಶೇಕಡ 16.8 ಮಂದಿ ಹೇಳಿದ್ದರು; ಉನ್ನತ ಶಿಕ್ಷಣ ಬೇಡವೆಂದವರು ಶೇಕಡ 64.5 ಮಂದಿ. ಮಹಿಳೆಯಿಂದ ಸಮಾಜ ನಿರೀಕ್ಷಿಸುವುದೂ ವಿವಾದಾತ್ಮಕ ವಾಗಿಯೇ ಇದೆ: ಮದುವೆ ಮಾರುಕಟ್ಟೆಯಲ್ಲಿ ಅವಳ ಆದಾಯ ಮುಖ್ಯ ಅಂಶವಾಗಿದೆ. ಅದೇ ಸಮಯದಲ್ಲಿ ಅವಳ ಉದ್ಯೋಗವು ಅವಳ ಪತ್ನಿ-ತಾಯಿ ಪಾತ್ರಗಳಿಗೆ ಯಾವ ರೀತಿಯಲ್ಲಿಯೂ ಅಡ್ಡಿ ಉಂಟುಮಾಡಬಾರದು. ಈ ನಿರೀಕ್ಷೆಗಳು ಭಾರತೀಯ ಮಹಿಳೆಯನ್ನು ಹೆಚ್ಚು ಶೋಷಿತೆಯನ್ನಾಗಿ ಮಾಡಿದೆ. ಒಂದು ಹೊಣೆಯಿಂದ ಮತ್ತೊಂದು ಜವಾಬ್ದಾರಿಯತ್ತ ಸಾಗುವ ಅವಳು ತನ್ನ ಸೌಕರ್ಯದತ್ತ ಗಮನಹರಿಸಲು ಸಮಯ ಇಲ್ಲವೆಂದು ತೊಳಲಾಡುತ್ತಾಳೆ.

## ಗಳಿಕೆ ಸಾಮರ್ಥ್ಯ

ಆರ್ಥಿಕ ವ್ಯವಸ್ಥೆಯ ಸ್ವರೂಪ ಮಹಿಳಾ ಉದ್ಯೋಗದ ಮೇಲೂ ಪರಿಣಾಮ ಬೀರುತ್ತದೆ. ಭಾರತದಲ್ಲಿ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಿದೆ. ಮಹಿಳೆಯರು ವೇತನ ನೀಡದ ದುಡಿಮೆಯಲ್ಲಿ ಅಧಿಕ ಶ್ರಮಜೀವಿಯಾಗಿದ್ದಾರೆ. ಕೂಲಿ ಸಿಗುವ ದುಡಿಮೆಯಲ್ಲಿ ನಿರುದ್ಯೋಗಿಗಳಾಗಿದ್ದಾರೆ.

1973ರಲ್ಲಿ ಮಹಿಳಾ ಕಾರ್ಮಿಕ ಬಲ 7.86 ಕೋಟಿ ಎಂದು ಅಂದಾಜಿತ್ತು. 1983ರಲ್ಲಿ ಅದು 9.93 ಕೋಟಿಗೆ ಏರಿತು. 1983ರಲ್ಲಿ ಒಟ್ಟು ಕಾರ್ಮಿಕ ಬಲ 30.6 ಕೋಟಿ ಎಂದು ಅಂದಾಜು ಮಾಡಲಾಗಿತ್ತು.

1973ರಲ್ಲಿ ಒಟ್ಟು ದುಡಿಯುವ ಮಹಿಳೆಯರಲ್ಲಿ ಸುಮಾರು ಶೇಕಡ 45 ಮಂದಿ ಕುಟುಂಬದ ಹೊಲ ಅಥವಾ ಕೃಷಿಯೇತರ ಕುಟುಂಬ ವ್ಯವಹಾರಗಳಲ್ಲಿ ವೇತನ ರಹಿತ ಸಹಾಯಕರಾಗಿದ್ದರು. ಸಂಘಟಿತ ಕ್ಷೇತ್ರದಲ್ಲಿ ಒಟ್ಟು ಉದ್ಯೋಗಿಗಳಲ್ಲಿ ಎಂಟನೇ ಒಂದು ಭಾಗದಷ್ಟು ಮಹಿಳೆಯರನ್ನು ನೇಮಿಸಿಕೊಳ್ಳಲಾಗುತ್ತಿದೆ. 1978ರಲ್ಲಿ ಮಹಿಳೆಯರ ಪಾಲು ಶೇಕಡ 12.4 (ಸಂಘಟಿತ ಕ್ಷೇತ್ರ) ಉದ್ಯೋಗ ವಿನಿಮಯ ಕಚೇರಿಗಳಲ್ಲಿ ಮಹಿಳೆಯರು ತಮ್ಮ ಹೆಸರು ದಾಖಲು ಮಾಡಿಕೊಳ್ಳುವುದು ಹೆಚ್ಚಾಗಿದೆ. ಆದರೆ ಉದ್ಯೋಗ ಅವಕಾಶ ಮಾತ್ರ ಇಳಿಮುಖವಾಗಿದೆ.

## ಅಸಂಘಟಿತ ಕ್ಷೇತ್ರ

ಅಸಂಘಟಿತ ವಲಯದಲ್ಲಿ ಅಧಿಕೃತ ಅಂಕಿ ಅಂಶಗಳೇ ಸ್ಪಷ್ಟ ಚಿತ್ರ ನೀಡುವುದಿಲ್ಲ. ಇಂಧನ, ಮೇವು ಮತ್ತು ತರಕಾರಿ ಸಂಗ್ರಹಿಸಿ ಮನೆಗೆ ಅಥವಾ ಮಾರಾಟಕ್ಕೆ ಒಯ್ಯುವ ಮಹಿಳೆಯರ ಕೆಲಸವು ಅಂಕಿ ಅಂಶದಲ್ಲಿ ಸೇರುವುದಿಲ್ಲ. ಅದೇ ರೀತಿ ಡೇರಿ, ಕೋಳಿ ಸಾಕಾಣಿಕೆ, ಗೃಹ ತೋಟಗಾರಿಕೆ, ಹೊಲಿಗೆ, ನೇಯ್ಗೆಯಂಥ ಉದ್ಯೋಗಗಳು ಲೆಕ್ಕಕ್ಕೇ ಬರುವುದಿಲ್ಲ. ವಿವಾಹಿತ ಮಹಿಳೆಯು ವೇತನ ರಹಿತ ದುಡಿಮೆಯಾಗಿ ಪ್ರತಿದಿನ ಮನೆ ಹೊರಗೆ 6 ರಿಂದ 7 ಗಂಟೆ ಕೆಲಸ ಮಾಡುತ್ತಾಳೆ. ಎಷ್ಟೋ ಮಂದಿ ಹತ್ತು ಗಂಟೆ ದುಡಿಯುತ್ತಾರೆ. ಗೃಹ-ಕೃತ್ಯವಲ್ಲದೆ, ಕೃಷಿ ಕೆಲಸ ನಿರತ ಮಹಿಳೆಯರು, ಸರಾಸರಿ ದಿನಕ್ಕೆ 12 ಗಂಟೆ ಕೆಲಸ ಮಾಡುತ್ತಾರೆ.

1981ರ ಗಣತಿ ಪ್ರಕಾರ. ಶೇಕಡ 80ರಷ್ಟು ದುಡಿಯುವ ಮಹಿಳೆಯರು ಕೃಷಿ ಕಾರ್ಮಿಕರು ಅಥವಾ ಸಾಗುವಳಿಗಾರರು. ಭಾರತದ ಲಕ್ಷಾಂತರ ಅಶಿಕ್ಷಿತ ಮಹಿಳೆಯರ ಈ ಆರ್ಥಿಕ ಕೊಡುಗೆ ಯಾರ ಗಮನಕ್ಕೂ ಬರುವುದಿಲ್ಲ. ಏಕೆಂದರೆ ಅವರು ಅಸಂಘಟಿತರು ಹಾಗೂ ವೇತನ ಪಡೆಯದ ದುಡಿಮೆಗಾರರು. ಆಹಾರ, ಬಟ್ಟೆ, ಶೂ, ಬುಟ್ಟಿ, ಬಕೆಟ್, ಪೊರಕೆ, ರತ್ನಗಂಬಳಿ ಮುಂತಾದ ತಯಾರಕರಿದ್ದಾರೆ. ಕೈಗಾರೀಕರಣದಿಂದಾಗಿ ಈ ಗೃಹ ಕೈಗಾರಿಕೆಗಳಿಗೆ ಈಗ ಹೆಚ್ಚಿನ ಮಾನ್ಯತೆ ಇಲ್ಲ. ಅವುಗಳಿಗೆ ಸರಿಯಾದ ಮಾರುಕಟ್ಟೆ ಕೂಡ ಅಲಭ್ಯ. ಕುಶಲಕರ್ಮಿಗಳಲ್ಲದವರ ಉತ್ಪನ್ನಗಳಂತೂ ಕೇಳುವವರೇ ಇಲ್ಲ, ಕಾರ್ಖಾನೆಗಳ ಸಗಟು ಉತ್ಪನ್ನದಿಂದಾಗಿ ಈ ಮಹಿಳೆಯರು ನಷ್ಟ ಅನುಭವಿಸುತ್ತಿದ್ದಾರೆ; ಜತೆಗೆ 'ಪೀಸ್ ವರ್ಕರ್' ಎಂಬ ಹಣೆಪಟ್ಟಿ ಬೇರೆ. ಮಧ್ಯದಲ್ಲಿ 'ಕಂಟ್ರಾಕ್ಟರ್'ಗಳ ಶೋಷಣೆ ಕೂಡ ಅನುಭವಿಸಬೇಕು.

ಮಹಿಳೆಯರ ಸಾಮಾಜಿಕ ಅಸಮತೋಲನವನ್ನು ನೀಗಲು ಕೆಲವು ಕಾನೂನುಗಳನ್ನು ರೂಪಿಸಲಾಗಿದೆ. ಸಾಂಪ್ರದಾಯಿಕ ಬದುಕಿನ ಬದಲಾವಣೆಗೆ ಪೂರಕವಾದ ಕಾನೂನು ರೂಪಿಸುವ ಕಾರ್ಯ ಮಂದಗತಿಯಲ್ಲಿ ಸಾಗಿದೆ.

ಕಾನೂನು ಇರುವ ಕಡೆ ಕೂಡ ಅದರ ಅನುಷ್ಠಾನವು ಸುಲಭ ಸಾಧ್ಯವೆನಿಸಿಲ್ಲ. ಮಹಿಳೆಯರ ಮೇಲಿನ ದೌರ್ಜನ್ಯವು ಪ್ರತಿದಿನ ವರದಿಯಾಗುತ್ತಿರುತ್ತದೆ. ಸರ್ಕಾರ ಅಥವಾ ಸ್ವಯಂಸೇವಾ ಸಂಸ್ಥೆಗಳ ವಿಶೇಷ ಕಾರ್ಯ ಕ್ರಮಗಳು ಹೆಚ್ಚಿನ ಪರಿಣಾಮವನ್ನೇನೂ ಉಂಟು ಮಾಡಿಲ್ಲ; ಅರಿವು ಮಾತ್ರ ಮೂಡಿಸಿವೆ ಎನ್ನಬಹುದು.

ರಾಜಕೀಯ ಕ್ಷೇತ್ರದಲ್ಲಿಯೂ ಮಹಿಳೆಯರ ಪಾತ್ರ ಗಮನಾರ್ಹವಾಗಿಲ್ಲ. ಮತದಾನ ಮಾಡುವಾಗ ಅಥವಾ ಚುನಾವಣೆ ಸ್ಪರ್ಧಿಸುವಾಗ ಯಾವುದೇ ಸಂದರ್ಭದಲ್ಲಿಯೂ ಮಹಿಳೆಯರ ಸಂಖ್ಯೆ ಕಡಿಮೆಯಾಗಿಯೇ ಇದೆ.

ಮಹಿಳೆಯರಲ್ಲಿ ನಾಯಕತ್ವ ಕೊರತೆ ಇಲ್ಲ. ಆದರೆ ಯಾವುದೇ ಚುನಾವಣೆ ಪ್ರಚಾರದಲ್ಲಿ ಮಹಿಳೆಯರಿಗೆ ಸಂಬಂಧಿಸಿದ ವಿಷಯಗಳು ಕಾಣಸಿಗುವುದು ಅಪರೂಪ. ಭಾರತದ ಮಹಿಳೆಯನ್ನು ಸಂಘಟಿಸುವ ಪ್ರಯತ್ನ, ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ, ಮಹಾತ್ಮಾ ಗಾಂಧಿ ಅವರಿಂದ ನಡೆದಿತ್ತು. ನಂತರ ಎಷ್ಟೋ ವರ್ಷ ಮಹಿಳಾ ಸಂಘಟನೆ ಯತ್ನ ಕಣ್ಮರೆಯಾಗಿಯೇ ಬಿಟ್ಟಿತು. ಇತ್ತೀಚಿನ ವರ್ಷಗಳಲ್ಲಿ ಅನೇಕ ಮಹಿಳಾ ಸಂಘಟನೆಗಳು ಗಂಭೀರ ಪ್ರಯತ್ನ ನಡೆಸಿ ಮಹಿಳೆಯರನ್ನು ಸಂಘಟಿಸು ತ್ತಿವೆ. ಸಾಮಾಜಿಕ ಅಸಮತೋಲನದ ಬಗ್ಗೆ ಅವರಲ್ಲಿ ಅರಿವು ಮೂಡಿಸಲು ಪ್ರಯತ್ನಿಸುತ್ತಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಸಹಸ್ರಾರು ಮಹಿಳಾ ಮಂಡಲಗಳಿವೆ. ಅವುಗಳಲ್ಲಿ ಬಹಳಷ್ಟು ಕ್ರಿಯಾಶೀಲವಾಗಿಲ್ಲ. ಗ್ರಾಮಾಂತರ ಮಹಿಳೆಯರ ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸ ಬೇಕಾಗಿರುವ ಈ ಮಹಿಳಾ ಮಂಡಲಗಳು ಕ್ರಿಯಾಶೀಲ ವಾಗುವಂತೆ ಮಾಡಬೇಕಾದುದು ಅಗತ್ಯ.

### ವಿಶ್ವಸಂಸ್ಥೆ ವರದಿ

ವಿಶ್ವ ಸಂಸ್ಥೆಯ ಮಹಿಳಾ ದಶಕದ ವಿಶ್ವ ಸಮಾವೇಶದ (ಕೋಪನ್‌ಹೆಗನ್, ಜುಲೈ 1980) ವರದಿಯಲ್ಲಿ ಒಂದು ಮಾತಿದೆ; "ಮಹಿಳೆಯರು ವಿಶ್ವ ವಯಸ್ಕ ಸಂಖ್ಯೆಯಲ್ಲಿ ಅರ್ಧ ಭಾಗವಿದ್ದು ಅಧಿಕೃತ ಕಾರ್ಮಿಕ ಬಲದಲ್ಲಿ ಮೂರನೆ ಭಾಗವಿದ್ದಾರೆ; ಒಟ್ಟು ದುಡಿಮೆ ಗಂಟೆಗಳಲ್ಲಿ ಸುಮಾರು ಮೂರನೆ ಎರಡು ಭಾಗದಷ್ಟು ಕೆಲಸ ಮಾಡುತ್ತಾರೆ; ವಿಶ್ವ ಆದಾಯದಲ್ಲಿ ಹತ್ತನೇ ಒಂದು ಭಾಗದಷ್ಟು ಆದಾಯ ಪಡೆಯುತ್ತಾರೆ ಮತ್ತು ವಿಶ್ವದ ಆಸ್ತಿಯಲ್ಲಿ ಶೇಕಡ ಒಂದಕ್ಕೂ ಕಡಿಮೆ ಭಾಗದಷ್ಟು ಆಸ್ತಿ ಒಡೆಯರಾಗಿದ್ದಾರೆ. ಇದು ಭಾರತದ ಮಹಿಳೆಯರ ವಿಚಾರದಲ್ಲಿಯೂ ಹೆಚ್ಚುಕಡಿಮ್ಮೆ ನಿಜವೆನಿಸಿದೆ.

(ಯೂನಿಸೆಫ್ ಪ್ರಕಟಿಸಿದ್ದ ವರದಿಯ ಆಧಾರಿತ)

6ನೇ ಪುಟದಿಂದ

## ವರದಕ್ಷಿಣೆ—ಅಧ್ಯಯನ

ಶಬ್ದ ಸ್ಪಷ್ಟಪಡಿಸುವ ಅರ್ಥ ಇಷ್ಟೆ. 1961 ರಲ್ಲಿ ಜಾರಿ ವರದಕ್ಷಿಣೆ ನಿಷೇಧ ಕಾಯ್ದೆಯನ್ವಯ ವರದಕ್ಷಿಣೆಯೆಂದರೆ ಯಾವುದೇ ಆಸ್ತಿ ಅಥವಾ ಬೆಲೆಯುಳ್ಳ ವಸ್ತುಗಳನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ 1) ಮದುವೆಯ ಒಂದು ಗುಂಪಿನವರು ಮತ್ತೊಂದು ಗುಂಪಿಗೆ ನೀಡುವುದು ಇದು ಮದುವೆಯ ನಿಷ್ಕರ್ಷೆಗೆಂದು ಮದುವೆಯ ಮುಂಚೆಯಾಗಲೀ, ಇಲ್ಲವೆ ಮದುವೆಯ ನಂತರವಾಗಲೀ ಕೊಡುವಂತಹ ಬೆಲೆ ಇದು. ಇಲ್ಲಿ ವರದಕ್ಷಿಣೆ ಪದ್ಧತಿಯ ಎರಡು ಅಂಶ ಸ್ಪಷ್ಟಪಡಿಸಿಕೊಳ್ಳಬೇಕು. 1) ವರದಕ್ಷಿಣೆಯೆನ್ನುವುದು ಆಸ್ತಿಯೋ ಅಥವಾ ಅತ್ಯಂತ ಬೆಲೆಯುಳ್ಳದ್ದಾಗಿರುವುದು. 2) ಇದನ್ನು ಮದುವೆಯಲ್ಲಿ ಮಾರಾಟದ ದೃಷ್ಟಿಯಿಂದ ಕೊಟ್ಟಂತಹದ್ದು. ಕಾಯಿದೆಯನ್ವಯ ಇದು ಮದುವೆಗೆ ಸಂಬಂಧಪಟ್ಟ ಎರಡು ಪಕ್ಷಗಳಲ್ಲಿ ಯಾರಾದರೂ ಕೊಟ್ಟಿರುವಂತಹುದು ಆಗಿರಬಹುದಾದರೂ, ಈಗ ನಾವು ಕಣ್ಣೆದುರಿಗೆ ಕಾಣುತ್ತಿರುವ ಪದ್ಧತಿಯಲ್ಲಿ ವರನ ಕಡೆಯುವರಿಗೆ ವಧುವಿನ ಕೊಡುವ ಬೆಲೆಯೇ ಆಗಿದೆ.

ಮದುವೆಗೆಂದು ವರನಿಗೆ–ವರನ ತಂದೆ ತಾಯಿಗಳಿಗಾಗಿ ಕೊಡುವ ಹಣ ಸಾವಿರಗಳಿಂದ ಲಕ್ಷಾಂತರ ರೂಪಾಯಿಗಳ ವರೆಗೆ ಹರಡಿದೆ. ಇದರ ಜೊತೆಗೆ ಆಧುನಿಕ ಜೀವನಕ್ಕೆ ಅವಶ್ಯವಾದ ಎಲೆಕ್ಟ್ರಾನಿಕ್ ಉಪಕರಣಗಳಿಂದ ಕಾರು, ಸ್ಕೂಟರ್, ಟೇಪ್–ರೆಕಾರ್ಡರ್ಸ್, ರೇಡಿಯೊ, ರೆಫ್ರಿಜರೇಟರ್‌ಗಳು ಮತ್ತು ಮನೆ, ನಿವೇಶನಗಳು ಎಲ್ಲವೂ ಸೇರುತ್ತವೆ. ಆಂಧ್ರಪ್ರದೇಶದ ರೆಡ್ಡಿ ಜನಾಂಗಗಳಲ್ಲಿ, ಗುಜರಾತಿನ ಕುಟುಂಬಗಳಲ್ಲಿ ಬಳಕೆಯಲ್ಲಿರುವ ವರದಕ್ಷಿಣೆಯ ಬೆಲೆ ಗಗನ ಮುಟ್ಟುತ್ತದೆ. ಈ ದುಬಾರಿ ವರದಕ್ಷಿಣೆಯ ಜೊತೆಗೆ ಅತ್ಯಂತ ಬೆಲೆ ಬಾಳುವ ಚಿನ್ನಾಭರಣಗಳು, ಒಟ್ಟಿಗಳು, ಉಡುಗೊರೆಗಳು, ಮದುವೆ ಛತ್ರಗಳು ಈ ಎಲ್ಲದರ ಖರ್ಚು ಜೊತೆಗೆ ಸೇರುತ್ತದೆ. ವರದಕ್ಷಿಣೆಯ ಬೆಲೆ ಎಷ್ಟು ಹೆಚ್ಚಿದ್ದರೆ ಮದುವೆಯ ಖರ್ಚು ಅಷ್ಟು ಹೆಚ್ಚಿರುತ್ತದೆ.

ಡಾ|| ಎ. ಎಸ್. ಅಲ್ಟೇಕರ್‌ಅವರು ತಮ್ಮ "ಹಿಂದೂ ನಾಗರೀಕತೆಯಲ್ಲಿ ಮಹಿಳೆಯರ ಸ್ಥಾನಮಾನ" – ಎಂಬ ಪುಸ್ತಕದಲ್ಲಿ ವರದಕ್ಷಿಣೆ ಪದ್ಧತಿಯ ಚರಿತ್ರೆಯನ್ನು ಕುರಿತು ಈ ರೀತಿ ಹೇಳುತ್ತಾರೆ – ಪ್ರಾಚೀನ ಸಮಾಜಗಳಲ್ಲಿ ವರದಕ್ಷಿಣೆ ಪದ್ಧತಿಯ ಹೆಸರೇ ಇರಲಿಲ್ಲ. ಸಿರಿವಂತ ಕುಟುಂಬಗಳಲ್ಲಿ ಮದುವೆಯ ಸಂದರ್ಭದಲ್ಲಿ ಬೆಲೆಬಾಳುವ ಉಡುಗೊರೆಗಳನ್ನು ಕೊಡುತ್ತಿದ್ದರು ಅಷ್ಟೆ. ಅಥರ್ವ ವೇದದಲ್ಲಿ ಒಂದು ಉಲ್ಲೇಖವಿದೆ. ರಾಜ ವಧುಗಳು ಒಮ್ಮೆ ಉಡುಗೊರೆಯಾಗಿ ನೂರು ಗೋವುಗಳನ್ನು ತಂದ ಉದಾಹರಣೆಯಿದೆ. ಆಗ ಈ ಪದ್ಧತಿ ಹೆಚ್ಚು ಪ್ರಚಲಿತವಾಗಿದ್ದಿದ್ದರೆ ಸ್ಮೃತಿಕಾರರು ಕನ್ಯಾ ಶುಲ್ಕವನ್ನು ಕುರಿತು ಪ್ರತಿಭಟಿಸಿದ್ದಂತೆಯೇ ಇದನ್ನೂ ವಿರೋಧಿಸುತ್ತಿದ್ದರೆಂಬುದು ನಿಜ. ಆದರೆ ಅಂತಹ ಖಂಡನೆಯ ಪ್ರಕರಣಗಳಾವುವೂ ನಮಗೆ ಕಂಡುಬರುವುದಿಲ್ಲ. ಆದರೆ ಸ್ಮೃತಿಯಲ್ಲಿ ವಧುವಿಗೆ ಮದುವೆ ಮಾಡಿಕೊಡುವಾಗ ಆಭರಣಗಳನ್ನು ಕೊಡಬೇಕೆಂಬುದಕ್ಕೇನೊ ಉಲ್ಲೇಖವಿದೆ. ಮಧ್ಯಕಾಲೀನ ಯುಗದಲ್ಲಿ ರಜಪೂತರಲ್ಲಿ ಮದುವೆಯ ಸಂದರ್ಭದಲ್ಲಿ ಈ ಕೊಡು ಕೊಳುಗೆಯ ಸಂಪ್ರದಾಯ ಹೆಚ್ಚಾಯಿತು. 13 ಹಾಗೂ 14 ನೆಯ ಶತಮಾನದಲ್ಲಿ ಈ ಪದ್ಧತಿಯ ಆರಂಭವನ್ನು ಸ್ವಲ್ಪ ಗುರುತಿಸಬಹುದು. ಕಳೆದ 60–80 ವರ್ಷಗಳಿಂದೀಚೆಗೆ ವರದಕ್ಷಿಣೆ ಪದ್ಧತಿಯು ಭಯಂಕರವಾಗಿ ಬೆಳೆದಿದೆ. ಒಳ್ಳೆಯ ವಿದ್ಯಾಭ್ಯಾಸ, ಸರ್ಕಾರಿ ನೌಕರಿ–ಕೈ ತುಂಬಾ ಸಂಬಳ ತರುವ ನೌಕರಿಗಳಿಂದಾಗಿ ಯುವಕರ ಸಾಮಾಜಿಕ, ಆರ್ಥಿಕ ಸ್ಥಾನಮಾನ ಉತ್ತಮಗೊಂಡಿತು. ಸಹಜವಾಗಿ ಮದುವೆಯ ಮಾರುಕಟ್ಟೆಯಲ್ಲಿ ಅವನ ಬೆಲೆ ಹೆಚ್ಚಿತು. ಬ್ರಿಟೀಷ್ ಪೂರ್ವ ಭಾರತದಲ್ಲಿ, ಕೃಷಿ ಸಮಾಜದಲ್ಲಿ ವರನಿಗಾಗಿ ಇಂತಹ ವಿಶೇಷಆಕರ್ಷಣೆ ಕಡಿಮೆಯೇ. ಆದ್ದರಿಂದ ವರದಕ್ಷಿಣೆಯ ಅತಿಹೆಚ್ಚಿನ ಬೇಡಿಕೆಯು ಇಂಗ್ಲೀಷ್ ಕಲಿತ ವಿದ್ಯಾವಂತರಿಗೂ ಬೇಡಿಕೆ ಒದಗಿಸಿತು. ಸಾಮಾನ್ಯವಾಗಿ ಇಂಗ್ಲೀಷ್ ಕಲಿತ ಯುವಕರು ತಮ್ಮ ಮಡದಿಯರನ್ನು ನಡೆಸಿಕೊಳ್ಳುವ ದೃಷ್ಟಿ ಹೊಸದಾಗಿತ್ತು. ಸಮಾನತೆಯ ನಡೆವಳಿಕೆ ಸ್ವಲ್ಪವಾದರೂ ಅವರಲ್ಲಿ ಕಂಡುಬರುತ್ತಿತ್ತು. ಆದ್ದರಿಂದ ಹೆಣ್ಣಿನತಂದೆತಾಯಿಗಳು ತಮ್ಮ ಅಳಿಯಂದಿರು ಇಂಗ್ಲೀಷ್ ಕಲಿತವರಾಗಿರಲಿ ಎಂದು ಆಸೆ ಪಡುತ್ತಿದ್ದರು. ಅದಕ್ಕೆ ಯಾವ ಬೆಲೆ ತೆರಲೂ ಸಿದ್ಧರಿದ್ದರು.

ಇಂಗ್ಲೀಷ್ ವಿದ್ಯಾಭ್ಯಾಸದ ಹೆಚ್ಚಿನ ಲಾಭ ಪಡೆದದ್ದು ಬ್ರಾಹ್ಮಣರೇ ಮೊದಲಾದ್ದರಿಂದ ಈ ದುಷ್ಟಪದ್ಧತಿಯನ್ನು ಪರಿಚಯಿಸಿದವರು ಅವರೆ ಆಗಿದ್ದಾರೆ. ಕೆಲವೊಂದು ಅಪವಾದಗಳನ್ನು ಬಿಟ್ಟರೆ ಬ್ರಾಹ್ಮಣರು ತಮ್ಮ ಕನ್ಯೆಯರನ್ನು

ಮದುವೆಮಾಡಿಕೊಡಲು ಹೆಚ್ಚು ಕಷ್ಟಪಡಲಾರಂಭಿಸಿದುದರ ನಂತರ ವರನೆಂಬುವನು ವಿದ್ಯಾವಂತನಿರಲಿ, ಅವಿದ್ಯಾವಂತನಿರಲಿ ವರದಕ್ಷಿಣೆ ಕಡ್ಡಾಯವೆನ್ನುವ ಹಂತ ಮುಟ್ಟಿತು. ಅದರಿಂದ ಅವಿವಾಹಿತ ಕನ್ಯೆಯರ ಸಂಖ್ಯೆಯೂ ಹೆಚ್ಚಿತು.

ಸುಮಾರು 80 ವರ್ಷಗಳ ಹಿಂದೆ ಪ್ರಥಮವಾಗಿ ವಿದ್ಯಾವಂತ ಬ್ರಾಹ್ಮಣ ಕುಟುಂಬಗಳಲ್ಲಿ ಆರಂಭವಾದ ಈ ವರದಕ್ಷಿಣೆ ಪದ್ಧತಿ ಇಂದು ಎಲ್ಲ ಜಾತಿಯ, ಎಲ್ಲ ಧರ್ಮದ ಕುಟುಂಬಗಳಲ್ಲೂ ವ್ಯಾಪಕವಾಗಿ ಹಬ್ಬಿದೆ.

ಆದ್ದರಿಂದ ವರದಕ್ಷಿಣೆಯ ಪದ್ಧತಿಯು ನೇರವಾಗಿ ವ್ಯಾಪಾರಿ ಸಂಬಂಧಗಳಿಂದ ಕೂಡಿದ್ದಾಗಿದೆ. ಸುಮಾರು ಸಂಬಳ ಪಡೆಯುವ ಎಲ್ಲ ಹುದ್ದೆಗಳಲ್ಲೂ ಇಂದು ವ್ಯಾಪಕವಾಗಿ ಹಬ್ಬಿರುವ ಭ್ರಷ್ಟಾಚಾರಕ್ಕೂ ಈ ಪದ್ಧತಿಗೂ ನೇರ ಸಂಬಂಧ ಇದೆ. ಇಲ್ಲನೇ ವರದಕ್ಷಿಣೆ ಮತ್ತು ಆಡ್ಡೂರಿಯ ಮದುವೆಯು ಕಳ್ಳಹಣದ ಕದೀಮರಿಗೆ ಮಾತ್ರ ಸಾಧ್ಯವಾಗುವ ಮಾತು. ಇದು ಯಾವುದೂ ಸಾಧ್ಯವಾಗದ ಸಂದರ್ಭದಲ್ಲಿ ಹೆಣ್ಣುಗಳ ಆತ್ಮಹತ್ಯೆ, ತಂದೆ ತಾಯಿಗಳ ಗೋಳಿಗೆ ಕೊನೆಯಿಲ್ಲ. ನಾವು ವರದಕ್ಷಿಣೆಗೆ ಯಾವುದೇ ಹೆಸರಿಟ್ಟರೂ ಅದರ ಬೇರುಗಳನ್ನು ಆಧುನಿಕ ಆರ್ಥಿಕ ಧೋರಣೆಗಳು, ಮೌಲ್ಯಗಳಲ್ಲಿ ಮತ್ತು 'ನಾಗರೀಕವಾದ ಮತ್ತು ಸಂತೋಷದ ಜೀವನ' ದ ಕಲ್ಪನೆಯಲ್ಲಿ ಹುಡುಕಬಹುದಾಗಿದೆ.

ಪ್ರಾಚೀನ ಭಾರತ ಮುಖ್ಯವಾಗಿ ಕೃಷಿಕ ಸಮಾಜವಾಗಿದ್ದು ಅದರ ವಿದ್ಯೆ, ಬುದ್ಧಿ ಎಲ್ಲವೂ ಸೀಮಿತವಾಗಿತ್ತು ಇಂಗ್ಲೀಷ್ ಕಲಿತ ಯುವಜನರಿಗಿರುವ ಹೆಚ್ಚಿನ ಗಳಿಕೆಯ ದುರಾಸೆಯಾಗಲೀ, ಅವಕಾಶವಾಗಲೀ ಇರಲಿಲ್ಲ. ಆದ್ದರಿಂದ ಸಂಪ್ರದಾಯಸ್ಥ ವರನಿಗೆ ಮದುವೆ ಮಾರುಕಟ್ಟೆಯಲ್ಲಿ ಹೆಚ್ಚಿನ ಬೇಡಿಕೆ ಇರಲಿಲ್ಲ. ಸ್ವತಂತ್ರ ಭಾರತದಲ್ಲಿ ನಾವು ಬಯಸಿದ ಹೆಚ್ಚಿನ ವಸ್ತುಗಳನ್ನು ವಿದೇಶದಿಂದ ಆಮದು ಮಾಡಿಕೊಳ್ಳಲು ಅವಕಾಶವಿದೆ. ಆದ್ದರಿಂದ ಒಳ್ಳೆಯ ಬಟ್ಟೆಬರೆ, ಅಡಿಗೆ ಮನೆಯ ಸಾಮಾನುಗಳು, ರೇಡಿಯೋ, ಸ್ಕೂಟರ್, ಕಾರು, ಟಿ. ವಿ. ಮುಂತಾದ ಬೆಲೆಬಾಳುವ ವಸ್ತುಗಳನ್ನು ಹೊಂದುವ ಆಸೆ ಮತ್ತು ಪೈಪೋಟಿ ಹೆಚ್ಚಿದೆ. ಇದಕ್ಕೆ ಸಮನಾಗಿ ಇವುಗಳನ್ನು ಹೊಂದುವ ಅವಕಾಶಗಳು ಅದೇ ಗತಿಯಲ್ಲಿ ಹೆಚ್ಚುತ್ತಿಲ್ಲ. ಆದ್ದರಿಂದ ಸುಲಭವಾಗಿ ಈ ವೈಭವಗಳನ್ನು, ಅಗತ್ಯಗಳನ್ನು ಸಂಪಾದಿಸುವ ಹಾದಿಯೆಂದರೆ ಕಾಳಸಂತೆ ಮಾರುಕಟ್ಟೆಯ ವ್ಯವಹಾರಗಳು, ಲಂಚಗುಳಿತನ, ವರದಕ್ಷಿಣೆ, ಇದೇ ಮುಂತಾದವುಗಳಾಗಿವೆ.

ಇವುಗಳ ಪರಿಹಾರದತ್ತ ನನ್ನ ಕೆಲವೊಂದು ಸಲಹೆಗಳು

1) ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸಾಮಾಜಿಕ ಶಾಸನಗಳು, ಸಾಮಾಜಿಕ ಸುಧಾರಣೆ ಹಾಗೂ ಸಾಮಾಜಿಕ ಬದಲಾವಣೆಯತ್ತ ಮಹತ್ವದ ಪಾತ್ರ ವಹಿಸಬಲ್ಲವು. ಉಗ್ರ ಕಾನೂನಿನ ಕ್ರಮಗಳಾದ ಆರ್ಡಿನೆನ್ಸನ್ನು ಜಾರಿಗೊಳಿಸುವುದರ ಮೂಲಕ ವರದಕ್ಷಿಣೆಯನ್ನು ಆಚರಿಸುವ ಎರಡೂ ಪಕ್ಷದವರನ್ನು ಉಗ್ರವಾಗಿ ಶಿಕ್ಷಿಸುವುದು.

2) ಕಾಲೇಜು, ವಿಶ್ವವಿದ್ಯಾನಿಲಯದಂತಹ ವಿದ್ಯಾಸಂಸ್ಥೆಗಳು ವರದಕ್ಷಿಣೆ ವಿರೋಧಿ ಪ್ರಚಾರ ಮತ್ತು ಆಚರಣೆಯಲ್ಲಿ ಪ್ರಮುಖ ಪಾತ್ರ ವಹಿಸಬಲ್ಲವು.

3) ಸರಳ ವಿವಾಹ ಮತ್ತು ವರದಕ್ಷಿಣೆ ವಿರೋಧದ ಮದುವೆಗಳಿಗೆ ಸಾಕಷ್ಟು ಪ್ರಚಾರಕೊಟ್ಟು ಪ್ರೋತ್ಸಾಹ ನೀಡುವುದು.

4) ವರದಕ್ಷಿಣೆ ವಿರೋಧಿ ಚಳುವಳಿಯಲ್ಲಿ ಯುವಜನತೆ ಪಾತ್ರ ಮಹತ್ತರವಾದದು. ವರನು ತನ್ನ ತಂದೆ, ತಾಯಿ ಬೇಡಿಕೆಗಳಿಗೆ ತಲೆ ಬಾಗದೆ ವರದಕ್ಷಿಣೆ ವಿರೋಧಿಸಿ ಮದುವೆಯಾಗುವುದು. ವಧುಗಳು ಹಣ ಕೊಟ್ಟು ತಮ್ಮನ್ನು ಮದುವೆ ಮಾರುಕಟ್ಟೆಯಲ್ಲಿ ಮಾರಿಕೊಳ್ಳದೆ ಸ್ವಾಭಿಮಾನ ಮೆರೆಯುವುದು.

5) ಎಲ್ಲಾ ಅದ್ದೂರಿ ವಿವಾಹಗಳ ಖರ್ಚು ವೆಚ್ಚವನ್ನು ವರಮಾನ ತೆರಿಗೆಯವರು ಪರೀಕ್ಷಿಸಿ ತೆರಿಗೆ ವಿಧಿಸಬೇಕು.

ವರದಕ್ಷಿಣೆಯ ದುಷ್ಟ ಪದ್ಧತಿಯನ್ನು ಹೊಡೆದೋಡಿಸಲು ಎಲ್ಲ ಪ್ರಗತಿಪರ ಶಕ್ತಿಗಳು ಒಂದಾಗಬೇಕು.

(ಕರ್ನಾಟಕ ವಿಶ್ವವಿದ್ಯಾಲಯದ ಬೆಳ್ಳಿಹಬ್ಬದ ಸಂದರ್ಭದಲ್ಲಿ ಪ್ರಕಟವಾದ ಸಂಚಿಕೆಯಿಂದ ಆಯ್ದ ಲೇಖನದ ಸಂಗ್ರಹಾನುವಾದ.)

## ಅಂಡ್ ಸ್ಟಿಲ್ ದೆ ಡಾನ್ಸ್ : ವಿಮೆನ್, ವಾರ್, ಅಂಡ್ ಸ್ಟ್ರಗಲ್ ಫಾರ್ ಚೇಂಜ್ ಇನ್ ಮೊಜಾಂಬಿಕ್.

ಲೇಖಕ : ಸ್ಟೀಫನ್ ಉರ್ದಾಂಗ್
(ಅರ್ಥ್‌ಸ್ಕ್ಯಾನ್ ಪಬ್ಲಿಕೇಷನ್ಸ್ 1989)

---

ದಕ್ಷಿಣ ಆಫ್ರಿಕಾದಿಂದ ಗಡೀಪಾರಾಗಿದ್ದ ಸ್ಟೀಫನ್ ಉರ್ದಾಂಗ್ ಮೊಜಾಂಬಿಕ್‌ನಲ್ಲಿ ಅವಳಿಗಾದ ಅನುಭವದ ಹೃದಯಂಗಮ ಚಿತ್ರಣವನ್ನು ಈ ಕೃತಿಯಲ್ಲಿ ಕೊಡುತ್ತಾಳೆ. 1875ರಲ್ಲಿ ಸ್ವತಂತ್ರವಾದ ಮೊಜಾಂಬಿಕ್‌ನಲ್ಲಿ ಅವಳು ಪ್ರಥಮ ಬಾರಿಗೆ 1980ರಲ್ಲ ಭೇಟಿಯಾದಾಗಿನ ಅನುಭವದ ಚಿತ್ರಣ ಇಲ್ಲಿದೆ.

ಮೊಜಾಂಬಿಕ್‌ನ ಮಹಿಳೆಯರ ಬದಲಾವಣೆಗೆ, ಪ್ರಗತಿಗೆ ಸರ್ಕಾರ ನಡೆಸಿರುವ ಕಾರ್ಯಕ್ರಮಗಳನ್ನು ಅವಲೋಕಿಸುವ ಉದ್ದೇಶದಿಂದ 1987ರಲ್ಲಿ ಮತ್ತೊಮ್ಮೆ ಉರ್ದಾಂಗ್ ಅಲ್ಲಿಗೆ ಭೇಟಿ ನೀಡಿದಾಗ ಅವಳು ಅಲ್ಲಿ ಕಂಡದ್ದು ಗಾಭರಿಯ ವಿಷಯವಾಗಿತ್ತು. ಅಲ್ಲಿ ನಿರಾಶ್ರಿತರ ಶಿಬಿರಗಳು ನಿರ್ಮಾಣವಾಗಿದ್ದವು. ಯುದ್ಧ ಮುಂದುವರಿದಿತ್ತು. ಮಹಿಳೆಯರ ಪ್ರಗತಿಗಾಗಲೀ, ವಿಮೋಚನೆಗಾಗಲೀ ಯಾವ ಭರವಸೆಯೂ ಕಂಡು ಬರಲಿಲ್ಲ.

ಅಲ್ಲಿಗೆ ಹೋದ ಅವಳ ಮುಖ್ಯ ಉದ್ದೇಶ ಮಹಿಳೆಯರ ಪ್ರಗತಿಯನ್ನು ದಾಖಲಿಸುವುದೇ ಆಗಿತ್ತು. ಆದರೆ ಈ ಪುಸ್ತಕದುದ್ದಕ್ಕೂ ಲೇಖಕಿ ವಸಾಹತುಶಾಹಿ ನಂತರದ ಮೊಜಾಂಬಿಕ್‌ನ ಬೆಳವಣಿಗೆ, ದಕ್ಷಿಣ ಆಫ್ರಿಕಾ ಸರ್ಕಾರ ಉಂಟುಮಾಡುತ್ತಿರುವ ಅನಾಹುತಗಳು, ಅಸ್ಥಿರ ಸ್ಥಿತಿ– ಇವುಗಳನ್ನೂ ಕುರಿತು ಚಿತ್ರಿಸುತ್ತದೆ. ಹೇಗೆ ಈ ಎಲ್ಲಾ ವಿನಾಶದ ಬಿಸಿಯನ್ನೂ ಮಹಿಳೆಯರೇ ಅನುಭವಿಸಬೇಕಾಗಿ ಬಂದುದನ್ನೂ ತಿಳಿಸುತ್ತದೆ. ಅಲ್ಲಿ, ಮಹಿಳೆಯರೇ ಮುಖ್ಯವಾಗಿ ಆಹಾರ ತಯಾರಕರು, ಮಕ್ಕಳ ಲಾಲನೆ, ಪಾಲನೆ ಮಾಡುವವರೂ, ವಯಸ್ಸಾದವರನ್ನೂ, ರೋಗಿಗಳನ್ನೂ ನೋಡಿಕೊಳ್ಳಬೇಕಾದವರೂ ಆಗಿರುತ್ತಿದ್ದರು.

ಫ್ರೆಲಿಮೋ ನಾಯಕತ್ವದಲ್ಲಿ ಮಹಿಳಾ ವಿಮೋಚನೆಯು ಗಂಭೀರ ವಿಷಯವಾಗಿ ಪರಿಗಣಿಸಲ್ಪಟ್ಟಿತು. ಅವರಲ್ಲೊಬ್ಬ ಉರ್ದಾಂಗ್‌ಳಿಗೆ ಹೇಳಿದ : "ನಮಗೆ ಇದುವರೆಗೂ ತಿಳಿಯದಿದ್ದ ವಿಷಯವೊಂದನ್ನು ಫ್ರೆಲಿಮೋ ನಮಗೆ ಕಲಿಸಿದ. ಮಹಿಳೆಯರನ್ನೂ ಗೌರವಿಸಬೇಕೆಂಬುದನ್ನು ಕಲಿಸಿದ. ಮಹಿಳೆಯರನ್ನು ಗೌರವಿಸುವುದಾಗಲೀ ಗಂಭೀರವಾಗಿ ಸ್ವೀಕರಿಸುವುದಾಗಲೀ ಮಾಡಿಯೇ ಇರಲಿಲ್ಲ. ಈಗ ಅವರೂ ಧೈರ್ಯವಾಗಿ ಮುಂದೆ ಬಂದು, ಎಚ್ಚರಗೊಂಡು ಮಾತನಾಡುವಂತಹರಾಗಿದ್ದಾರೆ."

ಕೃಷಿಕ ಸಮಾಜ ಮತ್ತು ವಸಾಹತುಶಾಹಿ ವ್ಯವಸ್ಥೆ ತಮ್ಮ ಮೇಲೆ ಬಲವಂತವಾಗಿ ಹೊರಿಸಿರುವ ಪಾತ್ರಗಳನ್ನು ಬದಲಾಯಿಸಲು ಹಲವಾರು ಕ್ಷೇತ್ರಗಳಲ್ಲಿ ಮಹಿಳೆಯರು ಅವಿರತ ಪ್ರಯತ್ನ ನಡೆಸಿ ಯಶಸ್ವಿಯಾಗಿದ್ದಾರೆ. ಮದುವೆಯಾದ ನಂತರವೂ ದುಡಿಯುತ್ತಿರುವ ಮಹಿಳೆಯರಲ್ಲಿ ತಮ್ಮನ್ನು ಮತ್ತು ತಮ್ಮ ಮಕ್ಕಳನ್ನೂ ಸಾಕಿಕೊಳ್ಳಬಲ್ಲೆವೆಂಬ ಆತ್ಮ ವಿಶ್ವಾಸ ಒಂದು ಹೊಸ ರೀತಿಯ ಅಲೆಯನ್ನೇ ಸೃಷ್ಟಿಸುತ್ತಿದೆ. ಮದುವೆಯೆಂದರೆ ಗಂಡನ ಪರಾಧೀನತೆಯು, ಬಹುಪತ್ನಿತ್ವ ಹಾಗೂ ವರದಕ್ಷಿಣೆಯ ಬೇಗೆಯಿಂದ ನರಳಬೇಕಾದ ಸ್ಥಿತಿಯೆಂದು ಇಲ್ಲಿನ ಮಹಿಳೆಯರು ಭಾವಿಸಿದ್ದಾರೆ. ಅವರು ತಮ್ಮ ಹೋರಾಟವನ್ನು ಬೆಳೆಸಲು ಮತ್ತು ಮುಂದುವರೆಸಿಕೊಂಡು ಹೋಗಲು 'ಮೊಜಾಂಬಿಕ್ ಮಹಿಳೆಯರ ಸಂಘಟನೆ'ಯಂತಹ ಸಂಘಟನೆಯನ್ನು ಸ್ಥಾಪಿಸಿಕೊಂಡಿದ್ದಾರೆ. ಈ ಸಂಘಟನೆಗಳು ಇಲ್ಲಿನ ಮಹಿಳೆಯರಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಿಯನ್ನೂ ಉಂಟುಮಾಡುತ್ತಿದೆ.

1973ರಲ್ಲಿ ಸ್ಥಾಪಿಸಲ್ಪಟ್ಟ ಮೊಜಾಂಬಿಕ್ ಮಹಿಳೆಯರ ಸಂಘಟನೆಯ ಉದ್ಘಾಟನಾ ಸಮಾರಂಭದಂದು ಮಾತನಾಡುತ್ತಾ, ಮೊಜಾಂಬಿಕ್‌ದ ಅಧ್ಯಕ್ಷ ಸಮೋರಾ ಮಕೇಲ್, "ಮಹಿಳಾ ವಿಮೋಚನೆಯೆನ್ನುವುದು ಭಿಕ್ಷೆಯಲ್ಲ." ಮಹಿಳಾ ವಿಮುಕ್ತಿಯು ಕ್ರಾಂತಿಯ ಮೂಲಭೂತ ಅವಶ್ಯಕತೆ ಹಾಗೂ ವಿಜಯದ ಪೂರ್ವ ನಿಶ್ಚಿತ ಸ್ಥಿತಿ.

ಅಂತರ ರಾಷ್ಟ್ರೀಯ ಮಹಿಳಾ ದಶಕದ ಮುಖ್ಯ ಸಂದೇಶಗಳೆಂದರೆ, ಸಮಾನತೆ, ಅಭಿವೃದ್ಧಿ ಮತ್ತು ಶಾಂತಿ. ಶಾಂತಿಯೆನ್ನುವುದು ಮೊಜಾಂಬಿಯಾದಲ್ಲಿ ಇನ್ನೂ ದೂರದ ಕನಸು. ಎಲ್ಲ ಮನೆಗಳಲ್ಲೂ ಇನ್ನೂ ಸಮಾನತೆ ಸಿಧ್ಧಿಸಿಲ್ಲ, ಅಭಿವೃದ್ಧಿಯೆಂದರೆ, ಸಹಕಾರಿ ಸಂಘಗಳನ್ನು ಸ್ಥಾಪಿಸುವುದು, ಹಳ್ಳಿಗಳಲ್ಲಿ ಹಗಲು ಆಹಾರ ಕೇಂದ್ರಗಳನ್ನು ಸ್ಥಾಪಿಸುವುದೇ ಆಗಿದೆ. ಕೆಲವು ಮಹಿಳೆಯರು ಟ್ರಕ್ ಚಾಲಕಿಯರು, ಮತ್ತೆ ಕೆಲವರು ಅತ್ಯಂತ ಜವಾಬ್ದಾರಿಯುತವಾದ ಹುದ್ದೆಯಲ್ಲಿದ್ದಾರೆ. ಕುಟುಂಬದ ಚೌಕಟ್ಟಿನಲ್ಲಿಯೇ ಉಂಟಾಗಿರುವ ಪ್ರಗತಿಯನ್ನು ಕುರಿತು ಉರ್ದಾಂಗ್ ಹೇಳುತ್ತಾಳೆ: ಪುರುಷರೂ ಕೂಡಿ ಕಾನೂನಿನ ಒತ್ತಾಯದಿಂದಾಗಿ ಮಕ್ಕಳ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಆದರೂ ಅವರ ಸಾಮಾಜಿಕ ಹಾಗೂ ಗೃಹಬಂಧನದಿಂದ ವಿಮುಕ್ತಿ ಪಡೆಯಲು ಇನ್ನೂ ಸ್ವಲ್ಪ ಸಮಯ ಹಿಡಿಯುತ್ತದೆ. ಪಿತೃಪ್ರಧಾನ ಧೋರಣೆಯ ಪಳೆಯುಳಿಕೆಗಳು ಇನ್ನೂ ಹಲವಾರು ಮನೆಗಳಲ್ಲಿ ಸಾಕಷ್ಟು ಉಳಿದಿದೆ.

ಮೊಜಾಂಬಿಕ್‌ನ ಇನ್ನೂ ಬಹಳಷ್ಟು ಮಹಿಳೆಯರು ಅವಿದ್ಯಾವಂತರು ಮತ್ತು ತರಬೇತಿಯಿಲ್ಲದವರೂ ಆಗಿರುವುದರಿಂದ ಸ್ತ್ರೀ ಪುರುಷರ ನಡುವಿನ ಹೋರಾಟ ಇನ್ನೂ ಹೆಚ್ಚು ಕ್ಲಿಷ್ಟವಾಗಿದೆ.

ಸ್ಟೀಫನ್ ಉರ್ದಾಂಗ್ ಅವಳ ಈ ಭೇಟಿಯ ಸಂದರ್ಭದಲ್ಲಿ ಬಹಳಷ್ಟು ಮಹಿಳೆಯರ ಸಂದರ್ಶನ ನಡೆಸಿದ್ದಾಳೆ. ಆ ಮಹಿಳೆಯರ ನೋವು, ಆತಂಕ, ಭಯಗಳನ್ನು ವಿವರವಾಗಿ ವರ್ಣಿಸುತ್ತಾಳೆ. ಅವರ ಮಕ್ಕಳು ಹಸಿವಿನಿಂದ ಸಾಯುವುದಕ್ಕೆ ಕಾರಣರಾದದ್ದು ಅವರು. ಅವರಿಂದಾಗಿ ಹಲವಾರು ಮಂದಿ ನಿರಾಶ್ರಿತರು, ಅಂಗವಿಕಲರೂ, ರೋಗಿಗಳೂ ಆಗಿದ್ದಾರೆ. ಆದರೆ ಉರ್ದಾಂಗ್ ಈ ಮಹಿಳೆಯ ಕಂದದ ಎದೆಗಾರಿಕೆಯನ್ನು ಮೆಚ್ಚಿಕೊಳ್ಳುತ್ತಾಳೆ. ಅಸಾಮಾನ್ಯ ಎದೆಗಾರಿಕೆಯ ಮಹಿಳೆಯರ ವೀರಗಾಥೆಯನ್ನು ಹೇಳುವ ಈ ಪುಸ್ತಕ ನಿಜಕ್ಕೂ ಸ್ಫೂರ್ತಿದಾಯಕವಾದದ್ದು.

ದಕ್ಷಿಣ ಆಫ್ರಿಕಾದ ಸರ್ಕಾರದ ಪೈಶಾಚಿಕ ನಿಲುವು ಹೀಗೆ ಮುಂದುವರಿಯಬಹುದು. ಒಟ್ಟಾರೆ ದಕ್ಷಿಣ ಆಫ್ರಿಕಾದಲ್ಲಿ ಶಾಂತಿ ನೆಲೆಸಿ, ಸುಭದ್ರ ರಾಜಕೀಯ ವ್ಯವಸ್ಥೆ ಬರುವವರೆಗೂ ಈ ಅತ್ಯಾಚಾರಗಳಿಗೆ ಕೊನೆಯೇ ಇಲ್ಲ.

# ಮರೆತು ಹೋಗಿದ್ದ ಮಹಿಳಾ ಹಕ್ಕುಗಳ ಘೋಷಣೆ

ಫ್ರೆಂಚ್ ಕ್ರಾಂತಿಯ ದ್ವಿಶತಮಾನೋತ್ಸವವನ್ನು ಆಚರಿಸುತ್ತಿದ್ದ ಸಂದರ್ಭದಲ್ಲಿ, ಮೊಟ್ಟ ಮೊದಲ ಬಾರಿಗೆ ಪ್ರಕಟವಾದ 'ಮಹಿಳಾ ಪ್ರಜೆಗಳ ಹಕ್ಕುಗಳ ಪ್ರಕಟಣೆ' ಯನ್ನು ಕುರಿತು ಯುನೆಸ್ಕೊ ಎಲ್ಲರ ಗಮನ ಸೆಳೆಯಿತು. ಇದರ ಕರಡು ಪ್ರತಿಯನ್ನು ಮೊಟ್ಟಮೊದಲ ಬಾರಿಗೆ 1791ರಲ್ಲಿ ಫ್ರೆಂಚ್ ನ್ಯಾಷನಲ್ ಅಸೆಂಬ್ಲಿಯಲ್ಲಿ ಮಂಡಿಸಲಾಯಿತು. ಇದು ಅಸೆಂಬ್ಲಿಯಲ್ಲಿ ವಾಸಾದ ನಂತರ ಇದರ ಲೇಖಕಿ ಒಲಿಂಪೆ ಡಿ ಗಾಜಸ್ 1792ರಲ್ಲಿ ಪುರುಷರೊಡನೆ ಸಮಾನ ಹಕ್ಕುಗಳನ್ನು ಒತ್ತಾಯಿಸಿ ಇದನ್ನು ಪ್ರಕಟಿಸಿದಳು. ಇನ್ನೂರು ವರ್ಷಗಳ ಹಿಂದೆ ನಡೆದ ಈ ಘಟನೆ ನಿಜವಾಗಿಯೂ ಮೆಚ್ಚುವಂತದ್ದೆ.

ಯುನೆಸ್ಕೋ ವರದಿ ಮಾಡಿರುವ ಈ ಘೋಷಣೆಯ ಕೆಲವೊಂದು ಅಂಶಗಳು ಹೀಗಿವೆ :

"ಎಲೈ ಪುರುಷನೇ, ನಿನಗೆ ನ್ಯಾಯಕ್ಕೆ ಪಕ್ಷಪಾತ ತೋರಿಸುವ ಸಾಮರ್ಥ್ಯವಿದೆಯೇ ? ಈ ಪ್ರಶ್ನೆಯನ್ನು ಕೇಳುತ್ತಿರುವವಳು ಒಬ್ಬ ಮಹಿಳೆ. ನೀನು ಅವಳಿಂದ ನ್ಯಾಯವಾಗಿ ಪಡೆಯುವ ಹಕ್ಕನ್ನು ಕಸಿದುಕೊಳ್ಳಲಾರೆ. ನನ್ನ ಹೆಣ್ಣು ಜಾತಿಯವರನ್ನು ಶೋಷಿಸಲು ನಿನಗೆ ಅತ್ಯುಚ್ಛ ಅಧಿಕಾರ ಕೊಟ್ಟವರಾದರೂ ಯಾರು, ಎಂಬುದನ್ನು ಹೇಳುವೆಯಾ ? ನಿನ್ನ ಶಕ್ತಿಯೇ ? ಪ್ರತಿಭೆಯೇ ? ಈ ಜಗತ್ತನ್ನೆಲ್ಲಾ ಒಮ್ಮೆ ಸುತ್ತಿ ಬಾ, ಇಂತಹ ಶೋಷಣೆಯ ಮತ್ತೊಂದು ನಿದರ್ಶನವೇನಾದರೂ ನಿನಗೆ ಸಿಕ್ಕಲ್ಲಿ ಅಂತಹ ಒಂದು ಉದಾಹರಣೆಯನ್ನು ನನಗೆ ಕೊಡು.

ಪ್ರಕೃತಿಯಲ್ಲಿ ಲಿಂಗಭೇದದ ಒಂದು ಉದಾಹರಣೆಯನ್ನೇನಾದರೂ ನೀನು ಕಂಡರೆ ಹೇಳು. ಎಲ್ಲೆಲ್ಲೂ ಅದು ಸಮನ್ವಯವಾಗಿದೆ. ಪರಸ್ಪರ ಸಮತೆಯನ್ನು ಚಿರಂತನ ವಾಗಿ ಸೃಷ್ಟಿಕ್ರಿಯೆಯಲ್ಲಿ ಸಾರುತ್ತದೆ. ಆದರೆ ಪುರುಷ ಮಾತ್ರ ಇದಕ್ಕೆ ಅಪವಾದವಾಗಿದ್ದಾನೆ. ನ್ಯಾಯಕ್ಕೆ ಅಂಧನಾಗಿದ್ದಾನೆ. ವಿಜ್ಞಾನದ ಮೇಲೆ ಪ್ರಭುತ್ವ ಸಾಧಿಸಿದ್ದರೂ, ಜ್ಞಾನವಿಕಾಸದ ಈ ಶತಮಾನದಲ್ಲಿ ಮದಾಂಧನಾಗಿದ್ದಾನೆ; ಅವನಂತೆಯೇ ವಿದ್ಯೆ, ಪ್ರತಿಭೆ, ಸಾಮರ್ಥ್ಯಗಳಲ್ಲಿ ಸಮಾನತೆಯನ್ನು ಸಾಧಿಸಬಯಸುವ ಒಂದು ವರ್ಗದ ಮೇಲೆ ಸರ್ವಾಧಿಕಾರಿಯ ಆಳ್ವಿಕೆಯನ್ನು ಹೊರಿಸ ಹೊರಟಿದ್ದಾನೆ.

ತಾಯಿಯರು, ತಂಗಿಯರು, ಹೆಣ್ಣುಮಕ್ಕಳೂ ಆದ ಎಲ್ಲ ದೇಶದ ಪ್ರತಿನಿಧಿಗಳು ನ್ಯಾಷನಲ್ ಅಸೆಂಬ್ಲಿಯ ಸದಸ್ಯೆಯರಾಗಲು ತಮ್ಮ ಹಕ್ಕಿನಿಂದ ಒತ್ತಾಯಿಸುತ್ತಾರೆ. ಹೆಣ್ಣಿನ ಹಕ್ಕುಗಳ ಬಗ್ಗೆ ಈಗ ಸರ್ಕಾರ ತಾಳಿರುವ ದಿವ್ಯ ನಿರ್ಲಕ್ಷ್ಯ, ಅಗೌರವ, ಅಸಮಾನ,-ಇವೇ ಮುಂತಾದವುಗಳು ಸರ್ಕಾರದ ಎಲ್ಲ ಭ್ರಷ್ಟಾಚಾರಗಳಿಗೂ, ಸಾಮಾಜಿಕ ಅನಿಷ್ಟಗಳಿಗೂ ಕಾರಣವೆಂದು ಅಭಿಪ್ರಾಯ ಪಡಲಾಗಿದೆ. ಆದ್ದರಿಂದ ಈ ಮಹಿಳೆಯರು ಸ್ವಾಭಾವಿಕವಾದ ಮತ್ತು ಈ ದೇಶದ ಪರಿಸ್ಥಿತಿಗಳ ನಡುವೆಯೇ ಉದ್ಭವಿಸಿದ ಮಹಿಳಾ ಹಕ್ಕುಗಳ ಪ್ರಕಟಣೆಯಲ್ಲಿ ಸ್ತ್ರೀಯರ ಸಾಮರ್ಥ್ಯ ಹಾಗೂ ಪುರುಷರ ಸಾಮರ್ಥ್ಯ—ಇವೆರಡನ್ನು ಸಮಾನವಾಗಿಯೇ ಇರುವುದೆಂದು ಒಪ್ಪಿಕೊಳ್ಳುತ್ತಾರೆ. ಸಂವಿಧಾನದ ರಕ್ಷಣೆ, ಒಳ್ಳೆಯ ನಡತೆ, ಸರ್ವರಿಗೂ ಸುಖ ಸಂತೋಷ—ಇವುಗಳನ್ನೇ ಮುಖ್ಯ ಧ್ಯೇಯವಾಗಿರಿಸಿಕೊಂಡು ಸರಳವಾದ ಮತ್ತು ವಿವಾದಾತ್ಮಕವಲ್ಲದ ತತ್ವಗಳ ಆಧಾರದ ಮೇಲೆ ಮಹಿಳಾ ಪ್ರಜೆಗಳ ಹಕ್ಕುಗಳನ್ನು ರೂಪಿಸಲಾಗಿದೆ. ಆದ್ದರಿಂದ ರೂಪದಲ್ಲಿ ಅಪ್ರತಿಮವಾದ, ಮಕ್ಕಳನ್ನು ಹೆರುವ ನೋವನ್ನೂ ಎದುರಿಸಬಲ್ಲಂತಹ ಹೆಣ್ಣು ಜಾತಿಯು ಈ ಕೆಳಗಿನ ಮಹಿಳಾ ಪ್ರಜೆಗಳ ಹಕ್ಕುಗಳ ಪ್ರಕಟಣೆಯನ್ನು ಘೋಷಿಸಿದೆ :—

ಪ್ರಕರಣ (Article) 1 :—"ಮಹಿಳೆಯು ಹುಟ್ಟುವಾಗಲೇ ಸ್ವತಂತ್ರಳಿದ್ದು ಪುರುಷನ ಎಲ್ಲ ಹಕ್ಕುಗಳಿಗೂ ಸಮಾನ ಬಾಧ್ಯಸ್ಥಳಾಗಿರುತ್ತಾಳೆ. ಸಾಮಾಜಿಕ ಸ್ಥಾನಮಾನಗಳನ್ನು ಸಮಾನ ಧ್ಯೇಯಗಳಿಂದಲೇ ನಿರ್ಧರಿಸಬೇಕು".

ಇಂತಹ ಇನ್ನೂ ಹದಿನೇಳು ಪ್ರಕರಣ (Article) ಗಳನ್ನೊಳಗೊಂಡ ಮಹಿಳಾ ಹಕ್ಕುಗಳ ಘೋಷಣೆಯ ಕರಡು ಪ್ರತಿಯನ್ನು ಒಲಿಂಪೆ ಡಿ ಗಾಜಸ್ ಫ್ರೆಂಚ್ ನ್ಯಾಷನಲ್ ಅಸೆಂಬ್ಲಿಗೆ 1791ರಲ್ಲಿ ಸಲ್ಲಿಸಿದ್ದಳು. ಅದು

ಅಸೆಂಬ್ಲಿಯಲ್ಲಿ ನಪಾಸಾಯಿತು. ಮಹಿಳಾವಾದ ಆರಂಭಗಾರ್ತಿಯರಲ್ಲಿ ಒಬ್ಬ ಪ್ರಮುಖಳಾದ ಒಲಿಂಪೆ ಡಿ ಗಾಜಸ್ ಅಶ್ಲೀಲೆಯೆಂದೂ, ದಾರ್ಷ್ಟ್ಯದ ಹೆಂಗಸೆಂದೂ ಲೋಕಾಪವಾದಕ್ಕೆ ತುತ್ತಾದಳು. ಆದಕ್ಕಾಗಿ ಅವಳನ್ನು 1793ರಲ್ಲಿ ಗಿಲೆಟಿನ್‌ಗೆ ಕಳಿಸಿ ಶಿಕ್ಷಿಸಲಾಯಿತು. ಆ ನಂತರ ಅವಳ ಮಹಿಳಾ ಹಕ್ಕುಗಳ ಘೋಷಣೆ ಸಂಪೂರ್ಣ ಮರೆತು ಹೋಯಿತು.

Reg. No. MAG (5) PRB. DECE 039/86-87
BOOK-POST/PERIODICALS

To,

If undelivered please return to :
Jagruthi Mahila Adhyayana Kendra
26, 1st Main Road, Vyalikaval
Bangalore-560 003